ಶ್ರೀ:

# ಮಂತ್ರಾಲಯ ಪ್ರಭುಗಳು



(ಶ್ರೀ. ರಾಘವೇಂದ್ರ ಚರಿತಾಮೃತವು)

(ಶ್ರೀ ರಾಘವೇಂದ್ರ ಚರಿತಾಮೃತಮ್)

ರಚನೆ :

ಜೆ. ಹೆಚ್. ಬಿ. ಆಚಾರ್ಯ

ಬೆಂಗಳೂರು



ಶ್ರೀ ಕೆ. ಭೀಮರಾವ್
ಶ್ರೀ ಗುರುರಾಜಾ ಜನರಲ್ ಏಜೆನ್ಸೀಸ್
ಶ್ರೀ ರಾಘವೇಂದ್ರರಾಯರ ಮಠ
ಸೀತಾಪತಿ ಅಗ್ರಹಾರ, ಬೆಂಗಳೂರು 18.

# ವಿಜ್ಞಾಪನೆ

ಶ್ರೀ ರಾಘವೇಂದ್ರತೀರ್ಥರು ಬೃಂದಾವನ ಪ್ರವೇಶ ಮಾಡಿ ಇಂದಿಗೆ ೨೯೯ ವರ್ಷಗಳು ತುಂಬಿದವು. 300ರಲ್ಲಿದ್ದೇವೆ! ಜಗದ್ಗುರುಗಳಾದ ಶ್ರೀ ಗುರುಸಾರ್ವಭೌಮರು ಭಜಕ ಜನರ ಮನೋಭೀಷ್ಟೆಗಳನ್ನು, ಕಾಮಧೇನು-ಕಲ್ಪವೃಕ್ಷ, ಚಿಂತಾಮಣಿಗಳಂತೆ ತೀರಿಸುತ್ತಿರುವುದು ಕೇಳಿದ್ದೇವೆ! ಕಂಡಿದ್ದೇವೆ! ಅಗವ್ಯ ಮಹಿಮರ ಅಮರ ಚರಿತೆಯನ್ನು ಅನೇಕರು, ದೇಶ ಭಾಷೆಗಳಲ್ಲಿ ರಚಿಸಿರುತ್ತಾರೆ! ಗುರು ಚರಿತ್ರೆಯನ್ನು ಗದ್ಯದಲ್ಲಿಯು, ಪದ್ಯಾತ್ಮಕ ವಾಗಿಯೂ ರಚಿಸಿಗುತ್ತೇನೆ! ರಾಯರು ಬೃಂದಾವನಸ್ಥರಾದ ಮೇಲೆ ತೋರಿಸಿದ ಮಹಾತ್ಮ್ಯೆಗಳು, ಇತ್ತೀಚಿಗೆ ನಡೆದ ಘಟನೆಗಳನ್ನು ನಮ್ಮ ಅನುಭವಗಳೊಂದಿಗೆ ಸೇರಿಸಿ ಬೃಹದಾಕಾರವಾದ ಕೃತಿಯನ್ನು '**ಶ್ರೀ ಮಂತ್ರಾಲಯ ಪ್ರಭುಗಳು**' ಶ್ರೀ ಗುರುರಾಜರ ಭಕ್ತಜನರ ಕರಕಮಲಗಳಲ್ಲಿಡಲು ಪ್ರಯತ್ನಿಸಿದ್ದೇನೆ!

**'ದೇವರೆಂದರೆ ತಿರುಪತಿ ತಿಮ್ಮಪ್ಪ**
**ಗುರುವೆಂದರೆ ಮಂಚಾಲೆ ರಾಘಪ್ಪ'**

ಎಂಬುವ ಲೋಕವಾಣಿಯು ಶ್ರೀ ಗುರುರಾಜರಿಗೆ ಅನ್ವಯಿಸುವುದು. ಶ್ರೀ ಪ್ರಹ್ಲಾದರಾಜರು, ಶ್ರೀ ವ್ಯಾಸರಾಜ ಗುರುಸಾರ್ವಭೌಮರಾಗಿ ಅವತಾರ ಮಾಡಿದರು. ಲೋಕೋತ್ತರ ಮಹಿಮೆಗಳನ್ನು ತೋರಿದರು. ಶ್ರೀ ತುಂಗ ಭದ್ರಾ ನದೀ ತೀರದಲ್ಲಿ ನವಬೃಂದಾವನದಲ್ಲಿ ಬೃಂದಾವನಸ್ಥರಾಗಿ ವಿರಾಜಮಾನರಾಗಿದ್ದಾರೆ! ಮತ್ತೊಂದು ಜನ್ಮದಲ್ಲಿ ಕಥಾನಾಯಕರಾದ

ಶ್ರೀ ರಾಘವೇಂದ್ರತೀರ್ಥರಾಗಿ ಜನಿಸಿದರು. ದ್ವೈತವೇದಾಂತ ಸಾಮ್ರಾಜ್ಯವನ್ನಾಳಿ ತಮ್ಮದೇ ಆದ ಮಠವನ್ನು ಸ್ಥಾಪಿಸಿದರು. ಈಗ ಅವು

ಶ್ರೀ ವ್ಯಾಸರಾಯರ ಮಠ

ಶ್ರೀ ರಾಯರ ಮಠ

ವೆಂಬುದಾಗಿ ಮಠತ್ರಯದಲ್ಲಿ ಬೃಹತ್ಪೀಠಗಳಾಗಿ ರಾರಾಜಿಸುತ್ತಿವೆ !

ಮಂತ್ರಾಲಯ ಪ್ರಭುಗಳು ಪೀಠಸ್ಥರಾದಾಗ ಅನೇಕ ಮಹಿಮೆಗಳನ್ನು ತೋರಿಸಿ ಸುಜನೋದ್ಧಾರ ಮಾಡಿದ್ದಾರೆ ! ಅಮೂಲ್ಯ ಕೃತಿರತ್ನಗಳನ್ನು ರಚಿಸಿ ಮಾಧ್ವರು ಮರೆಯಲಾಗದ ಮಹದುಪಕಾರವನ್ನು ಮಾಡಿರುತ್ತಾರೆ ! ಗುರುರಾಜರು ಗಾಂಧರ್ವ ವಿದ್ಯಾವಿಶಾರದರು. ಚತುಃಷಷ್ಠಿ ಕಲಾಕೋವಿದರು. ಎಪ್ಪತ್ತು ವರ್ಷಗಳ ಕಾಲ ಭೌತಿಕ ಶರೀರದಿಂದ ದೃಗ್ಗೋಚರರಾಗಿದ್ದು ಶ್ರೀ ವಿರೋಧಿಕೃಚ್ಛ್ರಾವಣ ಬಹುಳ ಬಿದಿಗೆ ಗುರುವಾರದಲ್ಲಿ **ಸಶರೀರವಾಗಿ ಬೃಂದಾವನ ಪ್ರವೇಶ ಮಾಡಿದರು.** ಇಂದಿಗೆ ೩೫೫ ವರ್ಷಗಳು ತುಂಬಿದವು. ಈಗಲೂ ಗುರುರಾಜರು ಭಕ್ತರಿಗೆ ಪ್ರತ್ಯಕ್ಷ ದರ್ಶನ ಫಲ ಮಂತ್ರಾಕ್ಷತೆಗಳನ್ನು ಅನುಗ್ರಹಿಸುತ್ತಿರುವುದು ಕೇಳಿದ್ದೇವೆ ! ಕಂಡಿದ್ದೇವೆ ! ಶ್ರೀ ರಾಯರದು ಸುಖಪ್ರಾರಬ್ಧ. ಅನಂತಕೋಟಿ ಪುಣ್ಯರಾಶಿಯನ್ನು ಅನಿಷ್ಟ ಪುಣ್ಯವನ್ನು ಸರ್ವತೋಪಾದಿಯಲ್ಲಿ ಸಂಪಾದಿಸಿದ್ದಾರೆ ! ಅದು ಸವೆಯಬೇಕಾಗಿದೆ. ಮಂತ್ರಾಲಯದಲ್ಲಿ ಭವರೋಗವೈದ್ಯರೊಂದು ಅಂಗಡಿಯನ್ನೆ ಇಟ್ಟಿದ್ದಾರೆ ! ಅಪೇಕ್ಷಿತ ಪ್ರದಾತರಾಗಿ ಮೆರೆಯುತ್ತಿದ್ದಾರೆ ! ಸೇವಿಪ ಭಕ್ತರಿಗೆ ಶಾಖಾ ವೃಂದಾವನಗಳಲ್ಲಿಯೇ ಫಲವನ್ನು ಕೊಡುತ್ತಾರೆ ! ಜಾತಿ ಮತ ವೈಷಮ್ಯವೆಣಿಸದೆ, ನಿರ್ಮಲವಾದ ಭಕ್ತಿಗೆ ಪ್ರಸನ್ನರಾಗುತ್ತಾರೆ ಶ್ರೀ ಗುರುರಾಜರು. ಇಂದು ದೇಶಾದ್ಯಂತ ಶ್ರೀ ರಾಯರ ಭಕ್ತರನ್ನು ನೋಡಿದರೆ ಈ ಸತ್ಯದ ಅರಿವಾಗುವುದು.

ಗುರುಚರಿತೆಯನ್ನು ಕರ್ನಾಟಾಂಧ್ರಭಾಷೆಗಳಲ್ಲಿ ಪಾಮರನಾದ ನನ್ನಿಂದ ಬರೆಸಿದರು. ತೃಪ್ತಿ ಇಲ್ಲ. ಈಗ "ಮಂತ್ರಾಲಯ ಪ್ರಭುಗಳು" ಸಿದ್ಧವಾಯಿತು ! ಕೃತಿರಚನೆಯು ಒಂದು ಘಟ್ಟ. ಅದರ ಮುದ್ರಣ, ಪ್ರಕಾಶನ ಒಂದು ಸಮಸ್ಯೆಯಾಯಿತು ! ಇದು ಪ್ರತಿಯೊಬ್ಬ ರಚಯಿತ, ಕವಿಯ ಅನುಭವದ ಮಾತು ! ಆದರೆ ಗುರುಚರಿತ್ರೆಯ ಮುದ್ರಣವು ಸಮಸ್ಯೆಯಾಗಿ ತೋರಿದರೂ ಸಮಸ್ಯೆಯಾಗಲಿಲ್ಲ. ನಿಜ. 'ಮಂತ್ರಾಲಯ ಪ್ರಭುಗಳು' ಅಚಿರ ಕಾಲದಲ್ಲೇ ಹೊರಬರಲು ಮೂವರು, ಮಿತ್ರರು, ಹಾಗು ರಾಯರ ಭಕ್ತರ, ಸಹಾಯ, ಸಹಕಾರ, ಸೌಹಾರ್ದಗಳೆಂದು ತಿಳಿಸದಿದ್ದರೆ ಕರ್ತವ್ಯಲೋಪವಾದೀತು ! ಪೋಷಕರ ಪಟ್ಟಿಯಲ್ಲಿ ಸೇರಿದ

**ಶ್ರೀ ಎ. ಕೆ. ಕೃಷ್ಣಮೂರ್ತಿರಾಯರು**

**ಶ್ರೀ ಕೆ. ವೆಂಕಟರಾಯರು**

ಹಾಗೂ ಶ್ರೀ ಸುಧೀಂದ್ರ ಮುದ್ರಣಾಲಯದ ಮಾಲಿಕರಾದ

**ಶ್ರೀ ಭದ್ರಗಿರಿ ಸರ್ವೋತ್ತಮ ಪೈಗಳು**

ಒಂದು ಉತ್ತಮ ಕಾರ್ಯವಾಗಬೇಕಾದರೆ, ನಾಲ್ಕಾರು ಸಹೃದಯಿಗಳು, ಹತ್ತಾರು ಶ್ರೀಮಂತರ ಸಹಾಯ ಸಹಕಾರಗಳು ಬೇಕೇಬೇಕು ! ಗುರುಚರಿತ್ರೆ ಎಂದೊಡನೆ, ಮಿತ್ರರೂ, ಹಾಗೂ ರಾಯರ ಭಕ್ತರೂ, ಧಾರಾಳವಾಗಿ ವಿರಾಳಗಳನ್ನಿತ್ತು ಸಹಕರಿಸಿ, ಗುರುರಾಜರ ಪ್ರೀತಿಗೆ ಪಾತ್ರರಾದರು ! ಹಲವರು ಮುದ್ರಣದ್ರವ್ಯ ಸಹಾಯ ಮಾಡಿ, ತಮ್ಮ ಹೆಸರು ಪ್ರಕಟಿಸಬಾರದೆಂಬುದಾಗಿ ಸೂಚಿಸಿ ಗುಪ್ತದಾನ ಮಾಡಿದರು. ಮಹಾತ್ಮರಾದ

ಮಂತ್ರಾಲಯ ಪ್ರಭುಗಳು ತಮ್ಮ ಕೃತಿರತ್ನಕ್ಕೆ ನೆರವಾದ ಭಕ್ತಜನರಿಗೆಲ್ಲ ಇತೋಪ್ಯತಿಶಯವಾದ ಆಯುರಾರೋಗ್ಯ ಭಾಗ್ಯಗಳನ್ನನುಗ್ರಹಿಸಿ, ಸಂರಕ್ಷಿಸಲಿ. ಇದೇ ರೀತಿ ದ್ವೈತ ಯತಿಗಳ – ದಾಸಶ್ರೇಷ್ಠರ ಸೇವೆ ಮಾಡಲು ನನಗೆ ಶಕ್ತಿ, ಸಾಮರ್ಥ್ಯ, ಸೌಲಭ್ಯವನ್ನು ಕರುಣಿಸಲಿ ಎಂಬುದಾಗಿ ಪ್ರಾರ್ಥಿಸುತ್ತೇನೆ! ಕೃತಿರಚನೆಯಲ್ಲಿ, ಮುದ್ರಣದಲ್ಲಿಯೂ ದೋಷಗಳು ಕಂಡುಬಂದಲ್ಲಿ, ಸಹೃದಯಿಗಳು ನನಗೆ ತಿಳಿಸಿದಲ್ಲಿ, ಪುನರ್ಮುದ್ರಣದಲ್ಲಿ ತಿದ್ದಿಕೊಳ್ಳಲು ನೆರವಾಗುವುದೆಂದು ಪ್ರಾಜ್ಞರಲ್ಲಿ ಪಾಮರನ ಬಿನ್ನಹ !

ಕಾಶಿ-ರಾಮೇಶ್ವರವು-ಕಂಚಿ-ಕಾಳಹಸ್ತಿ
ಪಂಢರೀಪುರಿ-ತಿರುಪತಿ-ಬದರಿಕಾದಿ
ಸಕಲ ಯಾತ್ರೆಯ ಫಲವು ಮಂಚಾಲೆಯಲ್ಲೆ
ಪ್ರಾಪ್ತವೆಂಬರು ! ನಿಜವಯ್ಯ ! ರಾಘವೇಂದ್ರ !

ಗುರುರಾಜರು ಎಲ್ಲರಿಗೂ ಮಂಗಳವನ್ನುಂಟುಮಾಡಲಿ !

ಬೆಂಗಳೂರು
1970

ವಿದ್ವಜ್ಜನ ವಿಧೇಯ,
ಜೆ. ಹೆಚ್. ಬಿ. ಆಚಾರ್ಯ

# ಪೋಷಕರು



1. ಶ್ರೀ ಕೆ. ಜಿ. ವೆಂಕಟಾಚಲಪ್ಪ
   ಪರಿಮಳ ಕಾಫೀ.ವರ್ಕ್ಸ್ - ಸಾಗರ

2. ಶ್ರೀ ಎ. ಕೆ. ಕೃಷ್ಣಮೂರ್ತಿರಾಯರು
   ಸತ್ಯನಾರಾಯಣಪೇಟೆ - ಬಳ್ಳಾರಿ

3. ಶ್ರೀ ಆರ್. ರಾಮರಾವು
   ರೂಪನಗುಡಿ – ಬಳ್ಳಾರಿ

4. ಶ್ರೀ ಪ್ಯಾರಂ. ಅಂಜಿನಪ್ಪ, ಬಿ.ಕಾಂ.
   ಕುಡತನಿ – ಬಳ್ಳಾರಿ

5. ಶ್ರೀ ಕರಣಂ ಚಂದ್ರಮೌಳಿರಾಯರ ಮಗ
   ಕೆ. ವೆಂಕಟಚಾರ್, ಎಂ. ಎ.,
   ಸತ್ಯನಾರಾಯಣಪೇಟೆ - ಬಳ್ಳಾರಿ

6. ಶ್ರೀ ಆರ್.ಚಂದ್ರಶೇಖರಗೌಡರು ಬಿ.ಎ.,ಬಿ.ಇ,ಡಿ.,
   ಹಾವಿನ ಹಾಳು - ಶಿರುಗುಪ್ಪೆ ತಾಲ್ಲೂಕ್:

7. ಶ್ರೀ ಕೆ. ಎಸ್. ವಾದಿರಾಜ್
   ಹೋಟೆಲ್ ಶೋಭಾ
   ಶಿರುಗುಪ್ಪೆ - ಬಳ್ಳಾರಿ ಜಿಲ್ಲಾ

8. ಶ್ರೀ ಬಿ. ಇ. ಹನುಮಂತಯ್ಯ
ಮರ್ಚೆಂಟ್ - ಶಿರುಗುಪ್ಪೆ

9. ಶ್ರೀ ಬಿ. ಚಾಗಪ್ಪ
ಜಮಿಾನ್ದಾರ್ - ಶಿರುಗುಪ್ಪೆ

10. ಶ್ರೀ ಬಂಗಾರರಾಜು
ಮೈಲಾಪುರ ಕ್ಯಾಂಪ್-ತೆಕ್ಕಲಕೋಟೆ

11. ಶ್ರೀ ಓ. ಎಂ. ಚನ್ನಬಸಯ್ಯ
ರಾರಾವಿ - ಶಿರುಗುಪ್ಪೆ

12. ಶ್ರೀ ಬೆಳಗಲ್ ಶಾಮಾಚಾರ್ಲು
ಕಮಲಾಪುರ - ಹೊಸಪೇಟೆ

13. ಶ್ರೀ ಎ. ಶಿವರುದ್ರಪ್ಪ
ಹಲುವಾಗಲು - ಹರಪನಹಳ್ಳಿ

14. ಶ್ರೀ ಹೆಚ್. ಹನುಮಂತಾಚಾರ್ಯ
ಟ್ರಿಪ್ಲಿಕೇನ್ - ಮದರಾಸು

15. ಶ್ರೀ ಹೆಚ್. ಜನಾರ್ದನ್, ಬಿ. ಎ.,
ರಾಘವಾಚಾರಿ ರೋಡ್-ಬಳ್ಳಾರಿ

—o—

# ಮುದ್ರಣ ದ್ರವ್ಯ ಸಹಾಯ ಮಾಡಿದ ಭಕ್ತರು

—o—

1. ಶ್ರೀ ಕೆ. ಮಾಧವರಾವ್ ಬಿ.ಎ.
(ಸಹಕಾರ ಸಂಘಗಳ ಡೆಪ್ಯುಟಿ ರಿಜಿಸ್ಟ್ರಾರುಗಳು)
ಬಸವನ ಗುಡಿ - ಬೆಂಗಳೂರು

2. ಶ್ರೀ ಭೀಮರಾವ್ ಮಧ್ವರಾವ್ ಜೋರಾಪುರ್
ಬಸವನಗುಡಿ - ಬೆಂಗಳೂರು

3. ಶ್ರೀ ಎ. ಆರ್. ಶೇಷಗಿರಿ, ಐ. ಡಿ. ಡಿ.
ಜಯನಗರ – ಬೆಂಗಳೂರು

4. ಶ್ರೀ ಎಂ. ಆರ್. ವೆಂಕಟಾಚಲಪತಿ, ಬಿ.ಕಾಂ.
ರಾಜಾಜಿನಗರ - ಬೆಂಗಳೂರು

5. ಶ್ರೀ ಎಂ. ಎರ್. ರಾಮಕೃಷ್ಣ
ಗಾಂಧೀಬಜಾರ್ - ಬೆಂಗಳೂರು

6. ಶ್ರೀ ಕೃಷ್ಣಮೂರ್ತಿ ವೇಣುಗೋಪಾಲಾಚಾರ್
ಬಿದರಹಳ್ಳಿ - ಹಾವೇರಿ

7. ಶ್ರೀ ದೇವರಾವ್ ಶ್ರೀನಿವಾಸರಾವ್ ನಾಡಕರ್ಣಿ
ಮೇನೇಜರ್. ಕೋ-ಆ. ಸ್ಪಿನ್ನಿಂಗ್ ಮಿಲ್
ರಾಯಚೂರ್

8. ಶ್ರೀ ಹಣಮಂತರಾವ್ ಕೃಷ್ಣರಾವ್ ಅಥಣಿ, ಬಿ.ಎ.
ಮೇನೇಜರ್ - ಜಿಲ್ಲಾ ಕೈಗಾರಿಕಾ ಬ್ಯಾಂಕ್ –
ಹುಬ್ಬಳ್ಳಿ

9. ಶ್ರೀ ಬಿ. ನಾಗಲಿಂಗಪ್ಪ - ಬಳ್ಳಾರಿ

10. ಶ್ರೀ ಆರ್. ಬಿ. ತುಲಜಾರಾಂ - ಸಿಂಧನೂರು

11. ಶ್ರೀ ಜಿ. ಹೆಚ್. ಯಜುರ್ವೇದಿ - ಶಿವಮೊಗ್ಗ

12. ಶ್ರೀ ಆರ್. ಕೆ. ರಾಯದುರ್ಗ - ಹಾಸನ

13. ಶ್ರೀ ಎಲ್. ಕೆ. ಗಡ್, ಬಿ.ಎ., - ಬೆಳಗಾವಿ

14. ಶ್ರೀ ಬಿ. ಜಿ. ಆಚಾರ್ಯ ಬಿ.ಎ. - ರಾಯಚೂರ್

15. ಶ್ರೀ ಅಪ್ಪಾಶಾಸ್ತ್ರಿ - ಗೋವಿಂದಶಾಸ್ತ್ರಿ ಮೊರಬ
ಸಹಕಾರ ಇಲಾಖೆ - ಶಿರುಗುಪ್ಪೆ

16. ಶ್ರೀ ಡಿ. ರಾಘವೇಂದ್ರರಾವ್
ಮೇನೇಜರ್ - ಬಿ.ಡಿ.ಸಿ.ಸಿ.ಬಿ. ಬಳ್ಳಾರಿ

17. ಶ್ರೀ ಹೆಚ್. ಎಂ. ಕರಿವೀರಯ್ಯ
ಮಹಾನಂದಿ ಬೀದಿ - ಬಳ್ಳಾರಿ

18. ಶ್ರೀ ಡಿ. ವೆಂಕಟರಮಣರಾವ್ -
ಅಕ್ಕಸಾಲಿಗರ ಬೀದಿ - ಬಳ್ಳಾರಿ

19. ಶ್ರೀ ಜಿ. ಹನುಮಂತಪ್ಪ, ಬಿ.ಎ.,
ಅರಕೆರೆ - ಹೊನ್ನಾಳಿ

20. ಶ್ರೀ ಕೆ. ಜಿ. ಬಸವರಾಜ
ಜನತಾ ಬಜಾರ್ - ಚಿತ್ರದುರ್ಗ

---

(9-14 ಸಹಕಾರ ಸಂಘಗಳ ಅಸಿಸ್ಟೆಂಟ್ ರಿಜಿಸ್ಟ್ರಾರರು)

21. ಶ್ರೀ ಹರೇ ಸಮುದ್ರಂ - ಹನುಮಂತರಾವ್
ಲೋಕಲ್ ಫಂಡ್ ಆಡಿಟರ್
ಪೆನುಕೊಂಡ - ಆಂಧ್ರಪ್ರದೇಶ್

22. ಶ್ರೀ ಶಾಸ್ತ್ರಿ ರಾಮಚಂದ್ರರಾವ್, ಬಿ.ಎ.,
ಸತ್ಯನಾರಾಯಣಪೇಟೆ - ಬಳ್ಳಾರಿ

23. ಶ್ರೀ ಬಿ. ರಂಗಾಚಾರ್ಯ
ಕುಷ್ಟಿಗಿ - ರಾಯಚೂರ್ ಜಿಲ್ಲಾ

24. ಶ್ರೀ ಶ್ರೀನಿವಾಸಾಚಾರ್ ಕೃಷ್ಣಾಚಾರ್ ಗಲಗಲಿ, ಬಿ.ಎ.,
ಪಾರ್ವತೀನಗರ - ಬಳ್ಳಾರಿ

25. ಶ್ರೀ ಕೆ. ರಾಧಾಕೃಷ್ಣಮೂರ್ತಿ, ಬಿ.ಎ.ಬಿ.ಎಲ್.,
ಪಾರ್ವತೀನಗರ - ಬಳ್ಳಾರಿ

26. ಶ್ರೀ ಎಸ್. ಕೆ. ಹನುಮಂತಾಯರು
ಕರಣಂ - ಕೆಂಚನಗುಡ್ಡ - ಶಿರುಗುಪ್ಪೆ

27. ಶ್ರೀ ಯಸ್. ಭೀಮಾಚಾರ್ಯರ ಮಗ
ಹನುಮಂತಾಚಾರ್ಯ
ಉಬ್ಬಲಗುಂಡಿ - ಬಳ್ಳಾರಿ ಜಿಲ್ಲಾ

28. ಶ್ರೀ ಹೆಚ್. ಕೆ. ಹನುಮಂತರಾಯರ ಮಗ
ವಸುಧೇಂದ್ರರಾವ್ - ಶಿರುಗುಪ್ಪೆ

29. ಶ್ರೀ ವೈ. ದೇವೇಂದ್ರರಾವ್
ಉಪ್ಪಾರ ಹೊಸಳ್ಳಿ - ಶಿರುಗುಪ್ಪೆ

30. ಶ್ರೀ ಎಸ್. ವೆಂಕೋಬರಾವ್
ಕೆಂಚಗಾರ ಬೆಳಗಲ್ - ಶಿರುಗುಪ್ಪಿ

31. ಶ್ರೀ ಚಿದಂಬರರಾಯರ ಮಗ
ಬಿ. ಶ್ರೀನಿವಾಸರಾವ್ - ಶಿರುಗುಪ್ಪಿ

32. ಶ್ರೀ ಎ. ಕೃಷ್ಣಮೂರ್ತಿ ಆಚಾರ್
ತೆಕ್ಕಲಕೋಟೆ - ಬಳ್ಳಾರಿ

33. ಶ್ರೀ ಕರಣಂ ವೆಂಕೋಬರಾಯರ ಮಗ
ಭುಜಂಗರಾವ್
ಕಣೇಕಲ್ - ರಾಯದುರ್ಗ ತಾಲ್ಲೂಕ್

34. ಶ್ರೀಮತಿ ದೊಡ್ಡಿ ಲಕ್ಷ್ಮೀಬಾಯಿ
ರಾಣಿಪೇಟೆ - ಹೊಸಪೇಟೆ

35. ಶ್ರೀ ಡಿ. ಆರ್. ಹರಿಯಾಚಾರ್
ನರಸಿಂಹರಾಜಪುರ - ಚಿಕ್ಕಮಗಳೂರು ಜಿಲ್ಲಾ

36. ಶ್ರೀ ಟಿ. ಎನ್. ಕರಿಗಿರಿರಾವ್
ಗಾಂಧೀನಗರ - ಬೆಂಗಳೂರು

37. ಶ್ರೀ ಹೆಚ್. ಎಂ. ತಿಪ್ಪೇಸ್ವಾಮಿ
ಜಿಲ್ಲಾ ಸಹಕಾರ ಬ್ಯಾಂಕ್ - ಬಳ್ಳಾರಿ

38. ಶ್ರೀ ಆರ್. ಆಂಜನೇಯಲು - ಹೊಸಪೇಟೆ

39. ಶ್ರೀ ಹೊನ್ನೂರು ವೆಂಕೋಬಾಚಾರ್ಯ
ರಾಣಿಪೇಟೆ - ಹೊಸಪೇಟೆ

40. ಶ್ರೀ ಪೂರ್ಣಯ್ಯನವರ ಅಶ್ವತ್ಥನಾರಾಯಣರಾವ್
ಚಾಮರಾಜಪೇಟೆ - ಬೆಂಗಳೂರು

41. ಶ್ರೀ ಬಿ. ಶೇಷಗಿರಿರಾವ್, ಮೇನೇಜರ್
ಒಲಂಪಿಯಾ ಟಾಕೀಸ್ – ಮೈಸೂರು

42. ಶ್ರೀ ಕೆ. ಎಸ್. ಕೇಶವಮೂರ್ತಿ
ಲಕ್ಷ್ಮೀವಿಲಾಸ ಅಗ್ರಹಾರ - ಮೈಸೂರು

43. ಶ್ರೀ ಹೆಚ್. ವಿ. ವೆಂಕಟಸುಬ್ಬಾಶೆಟ್ಟಿ
ವಿದ್ಯಾರಣ್ಯಪುರ - ಮೈಸೂರು

44. ಶ್ರೀ ಜೆ. ಎ. ಸುಂದರರಾಜ್
ಚಾಮುಂಡಿಪುರಂ - ಮೈಸೂರು

45. ಶ್ರೀ ಚನ್ನಪ್ಪನವರ ಮಗ ಶ್ರೀ ಸಿ. ಸದಾಶಿವ
ಹೊಸಕೇರಿ - ಮೈಸೂರು

46. ಶ್ರೀ ಹೆಚ್. ಜಿ ಶ್ರೀನಿವಾಸ ಚಕ್ರವರ್ತಿ
ಹೆಬ್ಬಲಗುಪ್ಪೆ - ಮೈಸೂರು ಜಿಲ್ಲಾ

47. ಶ್ರೀ ಎ. ಕೆ. ವ್ಯಾಸರಾಯರು
ಶ್ರೀರಾಂಪುರ – ಬೆಂಗಳೂರು

48. ಶ್ರೀ ಕೊಡುಗೆಹಳ್ಳಿ ಶ್ರೀನಿವಾಸಚಾರ್ಯರ ಮಗ
ವೆಂಕಟೇಶಮೂರ್ತಿ - ಮಲ್ಲೇಶ್ವರ - ಬೆಂಗಳೂರು

49. ಶ್ರೀ ವೈ. ಕೆ. ಅಕ್ಕಾಳಪ್ಪ
ತ್ಯಾಗರಾಜನಗರ - ಬೆಂಗಳೂರು

50. ಶ್ರೀ ಯಜಮಾನ್ ಹನುಮಯ್ಯನವರ ಮಗ -
ಹೆಚ್. ಹುಲ್ಲೂರಯ್ಯ, ರಾಜಾಜಿನಗರ – ಬೆಂಗಳೂರು

# ಅವತಾರತ್ರಯ

—o—

**ಶ್ರೀ ಪ್ರಹ್ಲಾದರಾಜರು**

**ಶ್ರೀ ವ್ಯಾಸರಾಜರು**

**ಶ್ರೀ ರಾಘವೇಂದ್ರರು**

—o—

ರೌದ್ರ ನರಸಿಂಹಮೂರ್ತಿಯ ಕ್ರೌರ್ಯ ನೋಡಿ
ಬ್ರಹ್ಮರುದ್ರಾದಿ ಸುರರು ಸಂಭ್ರಾಂತರಂತೆ !
ರಮೆಯು ಹೆದರಿದಂತಿರಲು ಪ್ರಹ್ಲಾದರಾಜ !
ರೌದ್ರವನು ಶಾಂತಗೊಳಿಸಿದ್ಯೆ ! ರಾಘವೇಂದ್ರ !

ಚಂದ್ರಿಕಾಚಾರ್ಯ ! ಕರ್ನಾಟ ಚಕ್ರವರ್ತಿ !
ತ್ರಿಶತಿಗೂ ಮಿಂಚಿ ಹನುಮತ್ಪ್ರತಿಷ್ಠೆ ಮಾಡಿ
ಭಾರತೀಪತಿ ಸತ್ಸೇವೆ - ಭಕ್ತಿಗೈದೆ !
ರಾಘವೇಂದ್ರಪದಾರ್ಚಕಾ ! ರಾಘವೇಂದ್ರ !

ವಿಜಯನಗರದೋಳ್ ಪುಟ್ಟಿದ್ಯೆ ವೇಂಕಟಾರ್ಯ !
ಗುರುಕುಲವಗೈದೆ ಶ್ರೀ ಕುಂಭಕೋಣಪುರದಿ
ಮೆರೆದೆ ಯತಿಯಾಗಿ ಶ್ರೀ ತಂಜಪುರದೊಳಂದೆ !
ರಮ್ಯ ಶ್ರೀಮಂತ್ರಪುರಿ ಚಂದ್ರ ! ರಾಘವೇಂದ್ರ !

ಆದಿ ಜನ್ಮದಿ ಭಕ್ತ ಪ್ರಹ್ಲಾದನಾದೆ
ವ್ಯಾಸಯತಿಯಾದೆ ಮತ್ತೊಂದು ಭವದಿ ನೀನು
ಮುದ್ದು ಮಂಚಾಲೆ ಗುರುವಾಗಿ ಮಹಿಮೆ ತೋರ್ದೆ
ರಮ್ಯಗುಣ ಸಾಂದ್ರ ! ಶ್ರೀ ಗುರುರಾಘವೇಂದ್ರ !



## ಶ್ರೀ ಗುರು ಸಾರ್ವಭೌಮರ
## ಮೂಲ ಬೃಂದಾವನ - ಮಂತ್ರಾಲಯ



ರಾ ಎನಲು ನಾಶವಾಗ್ವುದು ರಾಶಿ ದೋಷ !
ಘ ಎನೆ ಸದ್ಭಕ್ತಿ ಸುಜ್ಞಾನ ಕರುಣಿಪರಲ !
ವೇಂ ಎನಲು ಜನ್ಮ ಮೃತಿಗಳಂ ಬಿಡಿಸಿ ಪೊರೆವೆ !
ದ್ರ ಎನೆ ದ್ರವಿಣೋದ್ಯ ಶ್ರುತಿ ಸಾಧ್ಯನ ದರುಶಿಪರು

ಸಾರ್ಥಕವು ರಾಯ ರಾಘವೇಂದ್ರಾಖ್ಯ ! ನಿಮಗೆ.

निर्विघ्नमस्तु ॥ ॥ श्रीः ॥ ॥ शुभमस्तु ॥

ನಿರ್ವಿಘ್ನಮಸ್ತು ॥ ॥ ಶ್ರೀಶಪಾಹಿ ॥ ॥ ಶುಭಮಸ್ತು ॥

॥ ಶ್ರೀ ಗುರುಭ್ಯೋ ನಮಃ ॥ ಹರಿಃ ಓಂ ॥

# ॥ ಮಂಗಲಾಚರಣಮ್ ॥

ಓಂ ॥

ಜಯತ್ಯಜೋಽಖಂಡ ಗುಣೋರು ಮಂಡಲಃ
ಸದೋದಿತೋ ಜ್ಞಾನ ಮರೀಚಿ ಮಾಲೀ ।
ಸ್ವಭಕ್ತ ಹಾರ್ದೋಽಚ್ಛ ತಮೋ ನಿಹಂತಾ
ವ್ಯಾಸಾವತಾರೋ ಹರಿರಾತ್ಮಭಾಸ್ಕರಃ ॥ ॥ ೧ ॥

ಜಯತ್ಯಜೋಽಕ್ಷೀಣ ಸುಖಾತ್ಮಬಿಂಬಃ
ಸ್ವೈಶ್ವರ್ಯ ಕಾಂತಿ ಪ್ರತತಃ ಸದೋದಿತಃ ।
ಸ್ವಭಕ್ತ ಸಂತಾಪ ದುರಿಷ್ಟಹಂತಾ
ರಾಮಾವತಾರೋ ಹರಿರೀಶ ಚಂದ್ರಮಾಃ ॥ ॥ ೨ ॥

ಜಯತ್ಯ ಸಂಖ್ಯೋರು ಬಲಾಂಬುಪೂರೋ
ಗುಣೋಚ್ಛ ರತ್ನಾಕರ ಆತ್ಮ ವೈಭವಃ ।
ಸದಾ ಸದಾತ್ಮಜ್ಞ ನದೀಭಿರಾಪ್ಯಃ
ಕೃಷ್ಣಾವತಾರೋ ಹರಿರೇಕ ಸಾಗರಃ ॥ ॥ ೩ ॥

ಜಯತಿ ಹರಿರಚಿಂತ್ಯಃ ಸರ್ವ ದೇವೈಕ ವಂದ್ಯಃ
ಪರಮ ಗುರುರಭೀಷ್ಟಾವಾಪ್ತಿದಃ ಸಜ್ಜನಾನಾಮ್
ನಿಖಿಲ ಗುಣಗಣಾರ್ಣೋ ನಿತ್ಯ ನಿರ್ಮುಕ್ತ ದೋಷಃ
ಸರಸಿಜ ನಯನೋಽಸೌ ಶ್ರೀಪತಿರ್ಮಾನದೋನಃ ॥ ೪ ॥

ನಮಸ್ತೇ ಪ್ರಾಣೇಶ ಪ್ರಣತ ವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮಪ್ರಿಯತಮ ಹನೂಮನ್ ಗುರುಗುಣ ।

ನಮಸ್ತುಭ್ಯಂ ಭೀಮಪ್ರಬಲಶಮ ಕೃಷ್ಣೇಷ್ಟ ಭಗವನ್
ನಮಃ ಶ್ರೀಮನ್ಮಧ್ವಪ್ರದಿಶ ಸುದೃಶಂನೋ ಜಯಜಯ ॥ ॥ ೫ ॥

## ಶ್ರೀವಾಯು ಹನುಮದ್ಭೀಮ ಮಧ್ವಾಂತರ್ಗತ ನರಸಿಂಹ ರಾಮಕೃಷ್ಣ ವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯನಮಃ

ಹೇರಂಬ ಕುಂಭಲಸಿತಾಮಲ ಕುಂಕುಮಾಂಗ ।
ಮಾರಾರಿ ಪುತ್ರ ಕರಿವಕ್ತ್ರ ಪವಿತ್ರಗಾತ್ರ ।
ಕಾರುಣ್ಯರೂಪ ಸುಕಲಾಪ ಮಹಾಪ್ರತಾಪ ।
ಪ್ರಾರಬ್ಧಕಾರ್ಯ ಮುರುಧೈರ್ಯ ಭವೇದವಿಘ್ನಂ ॥ ॥ ೧ ॥

ಅಸ್ಪೃಷ್ಟ ದೋಷ ಗಂಧಾಯ ಕಲ್ಯಾಣಗುಣ ಸಿಂಧವೇ ।
ನಮೋ ನಮೋ ಭಕ್ತಮುಕ್ತಿದಾಯಿನೇ ಶೇಷಶಾಯಿನೇ ॥ ॥ ೨ ॥

ಶಮಯ್ನ ಭವಸಂತಾಪಂ ರಮಯನ್ ಸಾಧುಚಾತಕಾನ್ ।
ಕೃಷ್ಣಮೇಘಃ ಕೃಪಾದೃಷ್ಟಿ ವೃಷ್ಟ್ಯಾ ಪುಷ್ಣಾತು ಮಾಮಪಿ ॥ ॥ ೩ ॥

## ವಂದೇ ಮುಕುಂದಂ

ಓಂ ॥

ಶುದ್ಧಾನಂದೋರು ಸಂವಿದ್ಯ್ಯತಿಬಲ ಬಹುಲೌದಾರ್ಯ ವೀರ್ಯಾದಿ ದೇಹಂ ॥
ಚಿಂತಾಸಂತಾಪಲೇಶೋದ್ಭವ ಮೃತಿಮುಖರಾಶೇಷ ದೋಷಾತಿ ದೂರಂ
ಸದ್ಭಿರ್ವೈರಾಗ್ಯಭಕ್ತಿ ಶ್ರುತಿಮತಿ ನಿಯತ ಧ್ಯಾನ ಜಜ್ಞಾನ ಯೋಗಾತ್
ಗಮ್ಯಂ ವಂದೇ ಮುಕುಂದಾಭಿದಂ ಅಮಲಂ ಅಲಂ ಬ್ರಹ್ಮ ವೇದಾಂತವೇದ್ಯಂ ॥
॥ ೪ ॥

ಯಾನ್ಮಾಮಂದರ ಲೋಲಿತಾದ್ಯತ ಉದ್ವೈದ್ವಿದ್ಯೇಂದಿರಾ
ನಿರ್ಜರೈರ್ಜಾತೋ ಭಾರತ ಪಾರಿಜಾತ ಸುತರುಃ
ಸದ್ಬ್ರಹ್ಮ ಸೂತ್ರಾಮೃತವ್ ॥

ಆಸೀಸ್ತಂತ್ರ ಪುರಾಣ ಸನ್ಮಣಿಗಣೋಜಾತಃ ಶುಕೇಂದುಃ
ಸದಾ ಸೋऽಯಂ ವ್ಯಾಸಸುಧಾನಿಧಿರ್ಭವತುಮೇ
ಭೂತ್ಯೈ ಸತಾಂ ಭೂತಿದಃ
ಪೂರ್ಣಾಗಣ್ಯ ಗುಣೋದಾರ ಮೂರ್ತಯೇ ಪುಣ್ಯ ಕೀರ್ತಯೇ
ನಮಃ ಶ್ರೀಪತಯೇ ಭಕ್ತದತ್ತಸ್ವಾನಂದ ಮೂರ್ತಯೇ ॥ ॥ ೬ ॥

ಪೂರ್ಣಾಗಣ್ಯ ಗುಣೋದಾರ ನಿತ್ಯಸುಂದರ ಮೂರ್ತಿನೇ ।
ಶ್ರೀ ಬ್ರಹ್ಮನೀಂದ್ರ ಪೂರ್ವೇಡ್ಯ ಕೀರ್ತಿನೆ ಬ್ರಹ್ಮಣೇ ನಮಃ ॥ ॥ ೭ ॥

ಶ್ರೀಮದಾನಂದ ತೀರ್ಥಾರ್ಯ ಪಾದಪಂಕಜ ರೇಣವಃ ।
ಪವಿತ್ರಯನ್ತುಮಾಂ ನಿತ್ಯಂ ಪಾಪಪಾಟನ ಪಂಡಿತಾಃ ॥ ॥ ೮ ॥

ವಿಶ್ವಂ ಯಸ್ಯವಶೇ ಸರ್ವಮನಿಶಂ ಶಂಕರಾದಿಕಂ ।
ತಸ್ಯವಾಯೋ ಸ್ತೃತೀಯಾಂ ಶಮಾಶ್ರಯೇ ಶಮವಾಪ್ತಯೇ ॥ ॥ ೯ ॥

॥ ಭಗವತ್ಪಾದಾನ್ಪ್ರಪದ್ಯೇ ॥

ಸ್ವಾಂತ ಧ್ವಾಂತ ನಿಕೃಂತನೇಜಿತ ಮಹಾ ವೈಕರ್ತನಾಂಶು
ವ್ರಜಂ ನಿರ್ದೋಷಂ ಜಿತಚಂದ್ರ ಚಂದ್ರಿಕಮಲಂ
ತಾಪತ್ರಯೋನ್ಮೂಲನೇ ॥
ಗಾಂಭೀರ್ಯೇಜಿತ ಸಿಂಧುರಾಜ ಮಮಿತಂ
ಭಾಷ್ಯಂ ಯದಾಸ್ಯಾಂಬುಜಾತ್
ಆವಿರ್ಭೂತಮಮಂದಬೋಧ ಭಗವತ್ಪಾದಾನ್
ಪ್ರಪದ್ಯೇऽಥತಾನ್ ॥ ॥ ೧೦ ॥

ಶಾರದಾವಾಸವದನ ಶಾರದಾಮ್ಬುರುಹಾನ್ ಮುಹುಃ !
ಪದ್ಮನಾಭಮುನೀನ್ ವನ್ದೇ ಸರ್ವಶಾಸ್ತ್ರ ವಿಶಾರದಾನ್ ॥ ೧೧ ॥

ಶ್ರೀಮಧ್ವಸಂಸೇವನಲಬ್ಧ ಶುದ್ಧ ವಿದ್ಯಾಸುಧಾಂಭೋನಿಧಯೇಮ
ಲಾಲಯೇ ||

ಕೃಪಾಲವಃ ಪಂಕಜನಾಭ ತೀರ್ಥಾಃ
ಕೃಪಾಲವಃಸ್ಯಾನ್ಮಮಿ ನಿತ್ಯಮೇಷಾನ್ || || ೧೨ ||

ಶ್ರೀಮದ್ರಮಾರಮಣ ಸದ್ಗಿರಿಪಾದ ಸಂಗಿ
ವ್ಯಾಖ್ಯಾನಿನಾದ ದಲಿತಾಖಿಲ ದುಷ್ಟದರ್ಪಮ್ ।
ದುರ್ವಾದಿವಾರಣ ವಿದಾರಣ ದಕ್ಷ ದೀಕ್ಷಂ
ಅಕ್ಷೋಭ್ಯತೀರ್ಥಮೃಗರಾಜ ಮಹಂನಮಾಮಿ || || ೧೩ ||

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನ ವಿಚಕ್ಷಣಃ
ಜಯತೀರ್ಥಾಖ್ಯತರಣಿಃಭಾಸತಾನ್ನೋ ಹೃದಂಬರೇ || || ೧೪ ||

ಸತ್ಪದ್ಮ ಬಂಧವೋಯಸ್ಯಗಾವೋ ವಿಶ್ವತಮೋನುದಃ ||
ಸಸ್ಯಾತ್ತತ್ವಪ್ರಕಾಶಾಯ ಜಯತೀರ್ಥರವಿರ್ಮಮ || || ೧೫ ||

ಕಂಸಧ್ವಂಸಿ ಪದಾಂಭೋಜ ಸಂಸಕ್ತೋ ಹಂಸಪುಂಗವಃ ||
ಬ್ರಹ್ಮಣ್ಯ ಗುರುರಾಜಾಖ್ಯೋವರ್ತತಾಮ್ಮಮಮಾನಸೇ || || ೧೬ ||

ಪದವಾಕ್ಯ ಪ್ರಮಾಣಾಬ್ಧಿ ವಿಕ್ರೀಡನ ವಿಶಾರದಾನ್ ।
ಲಕ್ಷ್ಮೀನಾರಾಯಣ ಮುನೀನ್ ವಂದೇ ವಿದ್ಯಾಗುರೂನ್ ಮಮ ||
ಜ್ಞಾನ ವೈರಾಗ್ಯ ಭಕ್ತ್ಯಾದಿ ಕಲ್ಯಾಣ ಗುಣಶಾಲಿನಃ
ಲಕ್ಷ್ಮೀನಾರಾಯಣ ಮುನಿನ್ ವಂದೇ ವಿದ್ಯಾಗುರೂನ್ ಮಮ|| ೧೭ ||

ಪದವಾಕ್ಯ ಪ್ರಮಾಣಜ್ಞಾನ್ ಸಂಪ್ರದಾಯಾರ್ಥ ಕೋವಿದಾನ್
ವ್ಯಾಸತೀರ್ಥ ಮುನೀನ್ ಸೇವೇ ದುರ್ವಾದಿ ಫಣಿಪಕ್ಷಿಪಾನ್ ||
ಪದವಾಕ್ಯಪ್ರಮಾಣಜ್ಞೋ ದುರ್ಮತ ಧ್ವಾಂತ ಭಾಸ್ಕರಃ
ವ್ಯಾಸತೀರ್ಥ ಮುನೀಂದ್ರೋಮೇ
ಭೂಯಾತ್ ಜ್ಞಾನ ಸಮೃದ್ಧಯೇ || || ೧೮ ||

ಕಾಮಧೇನುರ್ಯಥಾಪೂರ್ವಂ ಸರ್ವಾಭೀಷ್ಟ ಫಲಪ್ರದಾ ।
ತಥಾಕಲೌವಾದಿರಾಜ ಶ್ರೀಪಾದೋಭೀಷ್ಟದಸ್ಸತಾಮ್ । ॥ ೧೯ ॥

ರಘೂತ್ತಮ ಗುರುಂವಂದೇ ರಘೂತ್ತಮ ಪದಾರ್ಚಕಂ ।
ಗಾಂಭೀರ್ಯರ್ಣಾರ್ಥ ಬಾಹುಲ್ಯ ಟೀಕಾತಾತ್ಪರ್ಯ ಬೋಧಕಂ ॥ ೨೦ ॥

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥ ॥ ೨೧ ॥

ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ॥
ಶ್ರೀ ರಾಘವೇಂದ್ರ ಗುರವೇ ನಮೋತ್ಯಂತ ದಯಾಲವೇ ॥ ॥ ೨೨ ॥

ಶ್ರೀ ಸುಧೀಂದ್ರಾಬ್ಧಿ ಸಂಭೂತಾನ್ ರಾಘವೇಂದ್ರ ಕಲಾನಿಧೀನ್ ।
ಸೇವೇ ಸಜ್ಞಾನ ಸೌಖ್ಯಾರ್ಥಂ ಸಂತಾಪತ್ರಯ ಶಾಂತಯೇ ॥ ॥ ೨೩ ॥

ಅಘಂದ್ರಾವಯತೇ ಯಸ್ಮಾತ್
ವೇಂಕಾರೋವಾಂಛಿತಪ್ರದಃ
ರಾಘವೇಂದ್ರಯತಿತಸ್ಮಾಲೋಕೇಖ್ಯಾತೋ ಭವಿಷ್ಯತಿ ॥

ವ್ಯಾಸೇನವ್ಯುಪ್ತ ಬೀಜಃ ಶ್ರುತಿ ಭುವಿ ಭಗವತ್ಪಾದ ಲಬ್ಧಾಂಕುರಶ್ರೀಃ
ಪ್ರತ್ನೈರೀ ಷತ್ಪ್ರಭಿನ್ನೋಽ ಜನಿಜಯಮುನಿನಾಸಮ್ಯಗುದ್ಭಿನ್ನ ಶಾಖಃ
ಮೌನೀಶವ್ಯಾಸ ರಾಜಾದುದಿತ ಕಿಸಲಯಃ
ಪುಷ್ಪಿತೋಽಯಂ ಜಯೀಂದ್ರಾದದ್ಯ
ಶ್ರೀ ರಾಘವೇಂದ್ರಾದ್ವಿಲಸತಿ ಫಲಿತೋ
ಮಧ್ವ ಸಿದ್ಧಾಂತಶಾಖೀ ॥ ॥ ೨೪ ॥

। ಇತಿಶಮ್ ।

ಮತ್ಕೃತೇರಕೇನ ಹರಿಣಾ ಯಾ ಪೂಜಾ ಸ್ವಸ್ವಕಾರಿತಾ ।
ವಾಗ್ಯಜ್ಞರೂಪಾಲಕ್ಷ್ಮೀಶ ಸ್ತಯಾ ಪ್ರೀಣಾತು ಕೇಶವಃ ॥
॥ ಶ್ರೀಕೃಷ್ಣಾರ್ಪಣಮಸ್ತು ॥

ಸಂಗ್ರಹ :
ಭೀಮಸೇನ ಪಿ. ಜ್ಞಾನಿ ...

# ಶ್ರೀ ರಾಘವೇಂದ್ರಾಷ್ಟಕ

ಶ್ರೀ ಮಧ್ವ ಸ್ಮೃತಾಂಬುಧಿ
ಸೋಮನೆ ! ವೀಣಾ ಮನೆತನದಬುಧನೆ ! ನಿನ್ನಂ
ನೇಮದಿ ಭಜಿಪರಿಗಿಹಪರ
ಕಾಮಿತ ಫಲವಿತ್ತು ಪೊರೆವ ಶ್ರೀ ಗುರುರಾಜಾ ! ॥ ೧ ॥

ಗುರು ರಾಘವೇಂದ್ರ ! ನಿನ್ನಯ
ಪರಿಮಳ ಸದ್ಗ್ರಂಥ "ಮೂಕಟಿಪ್ಪಣಿ" ಯಿಂದಂ
ಅರಿವರಿತು ತಪಸಿವ್ಯಾಸನು
ಪರಿಮಳವಂ ಪೂಜೆಮಾಡಿ ಪೊಗಳಿದ ಕವಿಯಂ ॥ ೨ ॥

ರುಚಿರಾನ್ನ ಕಡಬು ಪಾಯಸ
ರುಚಿಕರ ಪಾಕಗಳನುಂಡ ವಿಪ್ರರು – ನಿನ್ನಂ
ಶುಚಿಯಾಗಿ ಬಂದು ಪೂಜಿಸಿ
ಶುಚಿಯಾಗುವರಯ್ಯ ಸತತ ಶ್ರೀ ಗುರುರಾಜಾ ! ॥ ೩ ॥

ರಾಜಿಪ ಶ್ರೀ ಪ್ರಹ್ಲಾದನೆ !
ತೇಜಃ ಪುಂಜನೆ ! ಭಕುತಿಯ ಮೂರುತಿ ! ನಿನ್ನಂ
ಮೂಜಗ ದೊಡೆಯನು ನರಹರಿ
ಸೋಜಿಗದಿಂ ಬಂದು ಪೊರೆವ ಶ್ರೀ ಗುರುರಾಜಾ ! ॥ ೪ ॥

ಘನ ಕೃತಿ “ಚಂದ್ರಿಕ” ಕರ್ತನೆ !
ಅನುಪಮ ಕರ್ನಾಟ ಸಾರ್ವಭೌಮಾ ! ಜಗದೊಳ್
ಹನುಮಂತ್ ಪ್ರತಿಷ್ಠೆ ಮಾಡಿದ
ಮುನಿವರ ! ಶ್ರೀ ವ್ಯಾಸರಾಯ ಯತಿಕುಲ ತಿಲಕಾ ! ॥ ೫ ॥

ವೇಂಕಟ ಭಟ್ಟಾಚಾರ್ಯನೆ !
ಸಂಕಟವನು ದೂರಮಾಡಿ ಸಲಹಿದೆ ಸತಿಯಂ
ಕಿಂಕರನಿಗಿತ್ತ ಮುತ್ಸ್ನ-ಭ
ಯಂಕರ ಪೈಶಾಚ ಬಾಧೆ ತೊಲಗಿಸಿತಹಹಾ ! ॥ ೬ ॥

ದ್ರವ್ಯವು ಭಕುತಿಯ ಬೇಡುವೆ !
ಭವ್ಯವು ಭವಹರವು ನಿನ್ನ ನಾಮವ ಭಜಿ ಪೇಂ
ದಿವ್ಯಜ್ಞಾನಿಯೆ ! ಗುರುತರ
ದವ್ಯಾಜ ಕರುಣೆ ಕರುಣಿಸೊ ! ಶ್ರೀ ಗುರುರಾಜಾ ! ॥ ೭ ॥

ರುಜೆ - ದುಃಖ - ಬಾಧೆ ತೊಲಗಿಸಿ
ನಿಜಭಕ್ತರ ಪೊರೆವ ಗುರುವೆ - ಕಲ್ಪಕತೆರದಿಂ
ಭಜಿಪರಿ ಗಭೀಷ್ಟವೀವುದು
ನಿಜ: ವದಸನಾಣೆ ನಿನಗದು ಸರಿಯೈ ॥ ೮ ॥

# ಮುಕ್ತಿದಾತರಿಗೆ ಮೂನ್ನೂರು ತುಂಬಿತು !

—o—

ಮೂರು ಜನುಮದಿ ದೊರೆಯದೆ ಮುನಿಜನೇಂದ್ರ !
ಮೂರು ರೂಪದ ಶ್ರೀ ಹರಿ ಪೂಜೆಮಾಡಿ
ಮೂರು ರಾಮರ ಪದಸೇವೆ, ಪೂಜೆ ಗೈದೆ !
ಮೂರು ಮಠದಲಿ ಮೆರೆಯುವ ಮೂರ್ತಿ ನೀನು !
ಮೂರು ನೂರಾಂಜನೇಯ ಪ್ರತಿಷ್ಠೆ ಗೈದು
ಮೂರು ಮತ್ತೈದು ಯತಿಗಳ ಸೇರಿ ಮೆರೆವೆ !
ಮೂರು ಹಿಡಿ ಮಣ್ಣೆ ಚೊಕ್ಕ ಬಂಗಾರವಾಯ್ತು !
ಮೂರು ಜಾತಕಫಲಗಳ ಸಾರಿ ಪೇಳ್ದೆ
ಮೂರು ವಿಪ್ರರಿಗಿಷ್ಟಾನ್ನ ಭುಜಿಸಲಿತ್ತೆ !
ಮೂರು ಮತದವರಿಂದಲೂ ಪೂಜೆ ಗೊಂಬೆ !
ಮೂರು ಕಾಲಗಳರಿತಂಥ ಮುನಿಯು ನೀನು !
ಮೂರು ಲೋಕದಿ ನಿನ ಕೀರ್ತಿ ಸಾರಿತಯ್ಯ !
ಮೂರು ಬಾರಿ ಬೆರಳೆರಡು ತೋರಿದರಲ
ಮೂರು ವಿಧದಲಿ ಫಲವೀವ ಮುತ್ತು ನೀನೆ !
ಮೂರು ಮತ್ತೊಂದು ದಿಶೆಯಲ್ಲಿ ಮುದದಿ ಮೆರೆವೆ !
ಮೂರು ಸಾರಿ ಪ್ರದಕ್ಷಿಣೆ ಮುದದಿ ಮಾಳ್ಪೆ
ಮೂರು ಕಾಲದಿ ನಿನ ನಾಮ ಕೋರಿ ಸ್ಮರಿಪೆ
ಮೂರು ಕರಣಗಳ್ ಶುಚಿಮಾಡಿ ಪೊರೆಯೊ ಗುರುವೆ !
ಮೂರು ತಾಪಗಳ್ ಕಳೆಯಯ್ಯ ಪುಣ್ಯ ಪುರುಷ !
ಮೂರು ಭಾಗ್ಯಗಳ್ ಕರುಣಿಸೈ ಮುಕ್ತಿಗಾಗಿ !
ಮೂರು ನೂರಬ್ದ ತುಂಬಿತೈ ಮುನಿಪ ನಿಮಗೆ !

– ಭೀಮಕವಿ

# ಶ್ರೀ ಪ್ರಹ್ಲಾದ ರಾಜರು

———

ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ
ವ್ಯಾಪ್ತಿಂಚ ಭೂತೇಷ್ವಖಿಲೇಷು ಚಾತ್ಮನಃ
ಅದೃಶ್ಯತಾತ್ಯದ್ಭುತ ರೂಪ ಮುದ್ವಹನ್
ಸ್ತಂಭೇ ಸಭಾಯಾಂ ನಮೃಗಂ ನಮಾನುಷಂ ॥

ಶ್ರೀ ಪ್ರಹ್ಲಾದರಾಜರು ಪ್ರಾತಃ ಸ್ಮರಣೀಯರಾದ ಮಹನೀಯರಲ್ಲಿ ಮೊದಲಿಗರು. ಪರಮ ಭಾಗವತೋತ್ತಮರು. ಮಾತೃಗರ್ಭದಲ್ಲಿರುವಾಗಲೇ ಪ್ರಹ್ಲಾದನಿಗೆ ಶ್ರೀ ನಾರದರು ಹರಿಭಕ್ತಿಯನ್ನು ಉಪದೇಶಿಸಿದರು! ಐದು ವರ್ಷದ ಕಂದನಾದ ಪ್ರಹ್ಲಾದನು ತನ್ನ ತಂದೆಗೆ ಬೆದರದೆ ಶ್ರೀ ಹರಿಯೇ ಸರ್ವೋತ್ತಮ ನೆಂದು ಸಾರಿ, ಸದಾ ಶ್ರೀ ಹರಿನಾಮ ಸಂಕೀರ್ತನದಲ್ಲಿ ಕಾಲ ಕಳೆಯುತ್ತಿದ್ದನು. ವಿಷ್ಣು ದ್ವೇಷಿಯಾದ ಹಿರಣ್ಯ ಕಶಿಪು ತನ್ನ ಮಗನ ಹರಿಭಕ್ತಿಯನ್ನು ಬಿಡಿಸಲು ಸರ್ವ ಪ್ರಯತ್ನಗಳನ್ನು ಮಾಡಿ ವಿಫಲ ಮನೋರಥನಾದನು. ರಾಕ್ಷಸ ಚಕ್ರ ವರ್ತಿ, ಮಗನ ಮೇಲಿನ ಮಮಕಾರವನ್ನು ಬಿಟ್ಟು ಅವನನ್ನು ಹಾವುಗಳಿಂದ ಕಚ್ಚಿಸಿದನು. ಆನೆಗಳಿಂದ ತುಳಿಸಿದನು ಪರ್ವತಗಳ ಮೇಲಿನಿಂದ ತಳ್ಳಿಸಿ ದನು. ಕೊನೆಗೆ ಬೇಸತ್ತು ವಿಷವನ್ನೆ ಕುಡಿಸಿದನು. ಆದರೂ ಮಗನು ಸಾಯ ಲಿಲ್ಲ. ಪ್ರಹ್ಲಾದನನ್ನು ಶ್ರೀ ಹರಿ ಸದಾ ಕಾಯುತ್ತಲಿದ್ದನು. ಸಕಲಾಪತ್ತುಗಳು ಪರಿಹಾರವಾದವು.

ಹರಿಭಕ್ತಿಯೆ ಪ್ರಹ್ಲಾದಾಕಾರವನ್ನು ವಹಿಸಿತೆಂಬುದು ಭಾಗವತೋಕ್ತಿ. ದೈತ್ಯ ಬಾಲಕರಿಗೆ ಪ್ರಹ್ಲಾದನು ಹರಿಭಕ್ತಿಯನ್ನು ಬೋಧಿಸಿದನು. ಮುಕ್ತಿ ದಾತನಾದ ಶ್ರೀ ಹರಿಯೆ ಸರ್ವೋತ್ತಮನು. ಆತನೇ ಶರಣ್ಯನು. ಹರಿಯಲ್ಲಿ ದ್ವೇಷವನ್ನು ಬಿಟ್ಟು, ಆಶ್ರಯಿಸುವುದು ಶ್ರೇಯಸ್ಕರವೆಂದು ಪ್ರಹ್ಲಾದನು, ತನ್ನ

ತಂದೆಗೆ ವಿಜ್ಞಾಪಿಸಿದನು. ತಂದೆ ಮಕ್ಕಳ ಲಕ್ಷ್ಯ ಒಂದೆ. ಇಬ್ಬರೂ ಶ್ರೀ ಹರಿಯನ್ನು ಹುಡುಕಿದರು. ಆದರೆ ಮಾರ್ಗಗಳು ಮಾತ್ರ ಬೇರೆ ಬೇರೆ.

ಅರಿಲೋಕಭೀಕರನಾದ ಹಿರಣ್ಯ ಕಶಿಪು ಸವ.ಸ್ತಲೋಕಗಳನ್ನು ಜಯಿಸಿಡನು. ಸುರಾಸುರರು ಶರಣೆಂದರು. ಆದರೆ ಕಂದನಾದ ಪ್ರಹ್ಲಾದನೇ ತಂದೆಗೆ ಶತ್ರುವಾದನು. ಮಗನು ಅವಿಧೇಯನಾಗಿ ತನ್ನ ಶತ್ರುವಾದ ಹರಿಯನ್ನೇ ಸದಾ ಭಜಿಸುವುದನ್ನು ಸಹಿಸಲಾಗಲಿಲ್ಲ. ರಾಕ್ಷಸ ಚಕ್ರವರ್ತಿಗೆ ಮಗನಿಂದಲೇ ಪರಾಭವ. ತಂದೆಗೆ ಭರಿಸಲಾಗದ ದುಃಖವಾಯಿತು. ಒಂದು ದಿನ ಕುಮಾರನನ್ನು ಕರೆದು, "ಎಲೈ ಪ್ರಹ್ಲಾದಾ ! ಹರಿಭಕ್ತಿಯನ್ನು ಬಿಡಲೊಲ್ಲೆ, ಅವನು ಸರ್ವವ್ಯಾಪ್ತನೆಂಬುವಿ. ಹಾಗಾದರೆ, ನಿನ್ನ ಹರಿ ಈ ಕಂಬದಲ್ಲಿರುವನೇ ಎಂದು ಪ್ರಶ್ನಿಸಿದನು. ಆಗ ಪ್ರಹ್ಲಾದನು "ತಂದೆ, ಸಂದೇಹವೇಕೆ ? ಅಲ್ಲಿಯೂ ಇರುವನು" ಎಂದು ನುಡಿದನು. ಆಗ ಹಿರಣ್ಯ ಕಶಿಪು, ತನ್ನ ಪಾದದಿಂದ ಆ ಸ್ತಂಭವನ್ನು ತಾಡನ ಮಾಡಿದನು. ಆಗ ಸತ್ಯಸಂಧನು, ಭಕ್ತವತ್ಸಲನು ಆದ ಶ್ರೀ ಹರಿಯು ನೃಸಿಂಹಾವತಾರವನ್ನು ತಾಳಿ ಆ ಆವಿರ್ಭವಿಸಿ ಕಂಬದಿಂದಲೇ ಹೊರಬಂದನು. ಲೋಕ ಕಂಟಕನಾದ ಹಿರಣ್ಯ ಕಶಿಪುವನ್ನು ಸಂಹಾರಮಾಡಿ, ಪ್ರಹ್ಲಾದನ ಸಂಸ್ತುತಿಗೆ ಪ್ರಸನ್ನನಾದನು. ಪ್ರಹ್ಲಾದರಾಜನಿಗೆ ವರಗಳನ್ನಿತ್ತು ಪಟ್ಟಾಭಿಷೇಕ ಮಾಡಿಸಿದನು.

## ಶ್ರೀ ವ್ಯಾಸರಾಯರು

### ಈ ಸಮುನಿಗಳಿದ್ದೇನು ಮಾಡಿದರು ?

### : ವ್ಯಾಸಮುನಿಯು ಮಧ್ವಮತವನುದ್ಧರಿಸಿದ !

ಶ್ರೀ ಶ್ರೀ ಬ್ರಹ್ಮಣ್ಯತೀರ್ಥರು, ಶ್ರೀಮದಾಚಾರ್ಯರ ಬೃಹತ್ ಪೀಠದಲ್ಲಿ ಬಂದ ತಪೋಧನರಲ್ಲಿ ಒಬ್ಬರು. ಮೃತನಾದ ರಾಮಾಚಾರ್ಯನಿವರ ಆಶೀರ್ವಾದ ಬಲದಿಂದ ಬದುಕಿದನು. ಅನಂತರದಲ್ಲಿ, ರಾಮಾಚಾರ್ಯರಿಗೆ, ಸಾಧ್ವಿಯಾದ

ಸೀತಮ್ಮನಲ್ಲಿ ಜನಿಸಿದ ಶಿಶುವೇ ವ್ಯಾಸರಾಯನೆಂದು ಪ್ರಸಿದ್ಧಿಗೊಂಡಿತು. ವ್ಯಾಸ ರಾಯರು ಪ್ರಹ್ಲಾದಾಂಶ ಸಂಭೂತರು.

ಬ್ರಹ್ಮಣ್ಯತೀರ್ಥರು ಆ ಶಿಶುವನ್ನು ಮಮತೆಯಿಂದ ಬೆಳೆಸಿದರು. ಧ್ರುವಾಂಶ ಸಂಭೂತರಾದ ಶ್ರೀ ಶ್ರೀಪಾದರಾಜರಲ್ಲಿಗೆ ವಿದ್ಯಾಭ್ಯಾಸಕ್ಕಾಗಿ ಕಳುಹಿದರು. ಆ ಬಾಲಕನು ರಾಜರಲ್ಲಿ ದ್ವೈತ ವೇದಾಂತವನ್ನು ಸಾಂಗವಾಗಿ ಕಲಿತನು. ಬ್ರಹ್ಮಣ್ಯ ತೀರ್ಥರಾಬಾಲಕನಿಗೆ ಸಪ್ತವರ್ಷಾಬ್ದದಲ್ಲಿ ಸನ್ಯಾಸವನ್ನು ಕೊಟ್ಟು ವ್ಯಾಸತೀರ್ಥನೆಂಬ ಹೆಸರಿಟ್ಟರು.

ಶ್ರೀ ವ್ಯಾಸರಾಯರ ಭಕ್ತಿಗೆ ಮೆಚ್ಚಿ ಶ್ರೀ ವೇಣು ಗೋಪಾಲ ಕೃಷ್ಣನು ಅವರ ಕಣ್ಮುಂದೆ ನರ್ತನ ಮಾಡಿದನು. ಅದನ್ನು ನೋಡಿ ಗುರುಗಳಾದ ಶ್ರೀಪಾದ ರಾಜರು ಶಿಷ್ಯನ ವೈಭವವನ್ನು ಕೊಂಡಾಡಿದರು.

ಶ್ರೀ ವ್ಯಾಸರಾಜರು ಸರ್ವ ವಿದ್ಯಾ ಪಾರಂಗತರೆಂದು ಸುಪ್ರಸಿದ್ಧರಾದರು ಇವರ ಶಿಷ್ಯರಲ್ಲಿ ಮುಖ್ಯವಾದವರೆಂದರೆ

1. ಶ್ರೀ ಕುಂಭ ಕೋಣದಲ್ಲಿ ಬೃಂದಾವನಸ್ಥರಾಗ ವಿರಾಜಮಾನರಾದ ಶ್ರೀ ವಿಜಯೀಂದ್ರಯತಿ ಚಂದ್ರರು

2. ಶ್ರೀ ಸೋದೆಯಲ್ಲಿ ಸಶರೀರವಾಗಿ ಬೃಂದಾವನ ಪ್ರವೇಶಮಾಡಿ ಮೆರೆಯುತ್ತಿರುವ ಶ್ರೀ ವಾದಿರಾಜ ಯತಿರಾಜರು.

ಶ್ರೀ ವ್ಯಾಸರಾಯರು ತರ್ಕ ವೇದಾಂತ ನ್ಯಾಯ ಶಾಸ್ತ್ರಗಳಲ್ಲಿ ಅದ್ವಿತೀಯ ಪಾಂಡಿತಿಯನ್ನು ಗಳಿಸಿದರು. ಇವರು "ಚಂದ್ರಿಕೆ – ತರ್ಕತಾಂಡವ - ನ್ಯಾಯಾಮೃತ"ಗಳೆಂಬ ಗ್ರಂಥಗಳನ್ನು ರಚಿಸಿರುತ್ತಾರೆ. ಇದಕ್ಕೆ ವ್ಯಾಸ ತ್ರಯವೆಂದು ಹೆಸರು.

ಕನ್ನಡ ರಾಯನಾದ ಶ್ರೀ ಕೃಷ್ಣದೇವರಾಯನು ವ್ಯಾಸರಾಯರ ಪಾಂಡಿತ್ಯಕ್ಕೆ ಮೆಚ್ಚಿ, ಅವರಿಗೆ ರತ್ನಾಭಿಷೇಕವನ್ನು ಮಾಡಿ, ತನ್ನ ಸಾಹಿತ್ಯ ಪ್ರಿಯತೆಯನ್ನು ವ್ಯಕ್ತ ಪಡಿಸಿದನು.

1. ಕಾರಣಾಂತರದಿಂದ ವ್ಯಾಸರಾಯರು ಭೂವೈಕುಂಠ ವಾಸಿಯಾದ ಶ್ರೀನಿವಾಸನನ್ನು ಹನ್ನೆರಡು ವರ್ಷಗಳ ಕಾಲ ಪೂಜೆ ಮಾಡಿದರು. ಆಗ ಶ್ರೀನಿವಾಸನು ವ್ಯಾಸರಾಯರ ಕರೆಗೆ "ಓ" ಎಂದುತ್ತರ ಕೊಟ್ಟನಂತೆ. ಭಾಗವತೋತ್ತಮರು ಕರೆದರೆ ಭಕ್ತವತ್ಸಲನಾದ ಶ್ರೀನಿವಾಸನು ಬರುವುದು, ಮಾತಾನಾಡುವುದು ಸಹಜವಲ್ಲವೆ !

2. ವಿಜಯನಗರ ಸಾಮ್ರಾಜ್ಯಾಧಿಪತಿಯಾದ ಶ್ರೀ ಕೃಷ್ಣ ದೇವರಾಯನಿಗೆ 'ಕುಹೂ' ಯೋಗವೆಂಬ ಮಾರಣ ಗಂಡವು ಪ್ರಾಪ್ತವಾಯಿತು. ಆಗ ರಾಜನು ದೇಹ ರಕ್ಷಣಾರ್ಥವಾಗಿ ರಾಜ್ಯವನ್ನೆ ತ್ಯಜಿಸಬೇಕಾಯಿತು. ಆ ಸಮಯದಲ್ಲಿ ಶ್ರೀ ವ್ಯಾಸರಾಯರೇ ಕರ್ಣಾಟಕ ರಾಜ್ಯ ಸಿಂಹಾಸನವನ್ನಧಿಷ್ಟಿಸಿ ರಾಜ್ಯ ಪಾಲನವನ್ನು ಮಾಡಿದರು. ಕೃಷ್ಣರಾಯನನ್ನು 'ಕುಹು' ಯೋಗದ ಅಪಮೃತ್ಯುವಿನಿಂದ ಪಾರುಮಾಡಿದರು. ರಾಜ್ಯಪಾಲನೆಯನ್ನು ಮಾಡಿದ ಕುರುಹುಗಾಗಿ ಈಗಲೂ ಶ್ರೀ ಮಠದಲ್ಲಿ ಪೀಠಸ್ಥರು ಪ್ರತಿದಿನ ಸಾಯಂಕಾಲ "ದರ್ಬಾರು" ನಡೆಸುವರು. ಅಮಲವೇದಾಂತ ರಾಜ್ಯ ಸಿಂಹಾಸನಾಧಿಪರಾದ ಶ್ರೀ ವ್ಯಾಸರಾಯರು ಅತುಲಕರ್ಣಾಟ ರಾಜ್ಯ ಸಿಂಹಾಸನವನ್ನು ವಹಿಸಿದರು. ಇದು ಅವರ ಸುಖ ಪ್ರಾರಬ್ಧವಲ್ಲವೇ ?

3. ಶ್ರೀಗಳವರು ಪೀಠಸ್ಥರಾದಾಗ ಸುಮಾರು 300 ಪ್ರಾಣದೇವರ ಪ್ರತಿಷ್ಠೆ ಮಾಡಿದರು. ಅದರಲ್ಲಿ ಅತಿ ಮುಖ್ಯವಾದುದು, ಹಂಪೆಯಲ್ಲಿ ಪ್ರತಿಷ್ಠಿತವಾದ ಶ್ರೀ ಯಂತ್ರೋದ್ಧಾರಕಾಖ್ಯ ಆಂಜನೇಯ ಸ್ವಾಮಿ.

ಶ್ರೀ ವ್ಯಾಸರಾಯರು ತೊಂಭತ್ತು ವರ್ಷಗಳು ವೇದಾಂತ ಸಾಮ್ರಾಜ್ಯವನ್ನಾಳಿ, ತುಂಗಭದ್ರಾನದೀ ತೀರದಲ್ಲಿ, ಹಂಪೆಯಲ್ಲಿ, 'ಶ್ರೀ ನವ ಬೃಂದಾವನ' ದಲ್ಲಿ ಶ್ರೀ ವಿಳಂಬಿ ವತ್ಸರ ಫಾಲ್ಗುಣ ಬಹುಳ ಚತುರ್ಥಿಯದಿನ ಬೃಂದಾವನಸ್ಥರಾಗಿ ವಿರಾಜಮಾನರಾಗಿದ್ದಾರೆ ! ಅನಂತರದಲ್ಲಿ ಶ್ರೀ ವ್ಯಾಸರಾಯರೇ ಕಥಾನಾಯಕರಾದ ಶ್ರೀ ರಾಘವೇಂದ್ರ ತೀರ್ಥರಾಗಿ ಅವತಾರ ಮಾಡಿದರು.

ಶ್ರೀ ಪೂರ್ಣಬೋಧ ಮತವಂ
ಸ್ಥಾಪಿಸಿ–ಜಯಭೇರಿ ಹೊಡೆದ ಸಂಯಮಿವರ್ಯಾ
ಗೋಪಾಲಕೃಷ್ಣ ನರ್ಚಿಸಿ
ಭೂಪಾಲಕನಾಗಿ ಮೆರೆದ ವ್ಯಾಸ ಮುನೀಂದ್ರಾ !

## ಶ್ರೀ ಗುರುಸಾರ್ವಭೌಮರು

———

ಮೂಕೋಪಿಯತ್ಪ್ರಸಾದೇನ ।
ಮುಕುಂದಶಯ ನಾಯತೇ ।
ರಾಜ ರಾಜಾಯತೇ ರಿಕ್ತೋ ।
ರಾಘುವೇಂದ್ರಂ ತಮಾಶ್ರಯೇ

ಶ್ರೀ ವಿಜಯನಗರ ಸಾಮ್ರಾಜ್ಯಾಧಿಪತಿಯೂ, ಕರ್ಣಾಟಾಂಧ್ರ ಸಾರ್ವಭೌಮನೂ ಆದ ಶ್ರೀ ಕೃಷ್ಣ ದೇವರಾಯನ ಆಸ್ಥಾನ ವಿದ್ವಾಂಸರಲ್ಲಿ ಕೃಷ್ಣಭಟ್ಟನೊಬ್ಬನು. ಆತನ ಮಗನೆ ಕನಕಾಚಲಭಟ್ಟ. ಮೊಮ್ಮಗನೆ ತಿಮ್ಮಣಭಟ್ಟ ಇವರು ಗೌತಮ ಗೋತ್ರಜರು. ತಿಮ್ಮಣಭಟ್ಟ ವೇದಶಾಸ್ತ್ರಗಳಲ್ಲಿ ದೊಡ್ಡ ಪಂಡಿತ. ವೀಣಾವಾದನದಲ್ಲಿ ನಿಪುಣರಾದ ಇವರಿಗೆ ವೀಣಾ ಮನೆತನದವರೆಂಬ ಹೆಸರು ಸಾರ್ಥಕವಾಗಿತು.

ಗೋಪಿಕಾಂಬೆ ತಿಮ್ಮಣಾರ್ಯರ ಧರ್ಮಪತ್ನಿ. ಸದಾ ಪತಿ ಸೇವೆಯಲ್ಲಿ ನಿರತಳಾದ ಸಾಧ್ವೀಮಣಿ. ಇವರಿಗೆ ಸಂತಾನವಿರಲಿಲ್ಲ. ಈ ದಂಪತಿಗಳು ಪುತ್ರಾರ್ಥಿಗಳಾಗಿ ಶ್ರೀ ತಿರುಪತಿಗೆ ಪ್ರಯಾಣಮಾಡಿ, ಶ್ರೀನಿವಾಸನನ್ನು ಶ್ರದ್ಧಾ ಭಕ್ತಿಗಳಿಂದ ಸೇವೆ ಮಾಡಿ ಪ್ರಸನ್ನೀಕರಿಸಿಕೊಂಡರು. ಕೆಲಕಾಲದಲ್ಲಿವರಿಗೆ ಮಕ್ಕಳಾದರು. ಮಗಳಿಗೆ ವೆಂಕಮ್ಮನೆಂಬ ಹೆಸರಿಟ್ಟು, ಮಗನನ್ನು ಗುರುರಾಜ ಎಂದು ಕರೆದರು.

ಕೆಲಕಾಲ ಗೋಪಿಕಾಂಬೆ, ತಿಮ್ಮಣ್ಣಾರ್ಯರು ನಿಶ್ಚಿಂತೆಯಿಂದಿದ್ದರು. ಹೀಗಿರಲು ಒಂದು ದಿನ ಗೋಪಿಕಾಂಬೆ,

"ಒಂದು ಕಣ್ಣು ಕಣ್ಣಲ್ಲ-ಒಬ್ಬ ಮಗನು ಮಗನಲ್ಲ" ಎಂಬ ನುಡಿಯನ್ನು ನೆನೆದು, ತನ್ನ ಮನದ ದುಗುಡವನ್ನು ಪತಿದೇವನಿಗೆ ಬಿನ್ನವಿಸಿ, ಆತನ ಅಪ್ಪಣೆಯನ್ನು ಪಡೆದು, ಪತಿಯೊಂದಿಗೆ, ಶ್ರೀನಿವಾಸನ ದರ್ಶನಕ್ಕಾಗಿ ತಿರುಪತಿಗೆ ಹೊರಟಳು. ಹಿಂದೆ ಶ್ರೀನಿವಾಸನ ಸೇವೆಯನ್ನು ಮಾಡಿದ್ದರಷ್ಟೆ! ಆದರೆ ಈಗ ಅದಕ್ಕೆ ದ್ವಿಗುಣೀಕೃತವಾದ ಶ್ರದ್ಧಾ ಭಕ್ತಿಗಳಿಂದ ಆ ದಂಪತಿಗಳು ಶ್ರೀನಿವಾಸನ ಸೇವೆಯನ್ನು ಮಾಡಿದರು. ಭಕ್ತವತ್ಸಲನಾದ ವೇಂಕಟೇಶ್ವರನು ಅವರ ಭಕ್ತಿಗೆ ಮೆಚ್ಚಿ, ಸ್ವಪ್ನದಲ್ಲಿ ದರ್ಶನವಿತ್ತು,

"ನಿಮ್ಮ ಭಕ್ತಿಗೆ ಮೆಚ್ಚಿದೆನು. ನಿಮಗೆ ಪುತ್ರ ರತ್ನವನ್ನು ಅನುಗ್ರಹಿಸಿದೆನು. ಅವನು ನಿಮ್ಮ ವಂಶದ ಕೀರ್ತಿ ಗೌರವಗಳನ್ನು ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡುವನು. ನೀವು ಧನ್ಯ ಜೀವಿಗಳು; ನಿಮಗೆ ಮಂಗಳವಾಗಲಿ"

ಎಂಬುದಾಗಿ ನುಡಿದು ಅದೃಶ್ಯನಾದನು.

ಗೋಪಮ್ಮ ತಿಮ್ಮಣ್ಣಾರ್ಯರು, ಶ್ರೀನಿವಾಸನಿಗೆ ಕಾಣಿಕೆಸಲ್ಲಿಸಿ, ಪ್ರಸಾದವನ್ನು ಸ್ವೀಕರಿಸಿ, ನಿವಾಸ ಸ್ಥಾನವಾದ ಭುವನಗಿರಿಗೆ ಹಿಂದಿರುಗಿದರು. ಅಚಿರ ಕಾಲದಲ್ಲೇ ಗೋಪಿಕಾಂಬೆ ಗರ್ಭವತಿಯಾದಳು. ಆಗ ಆಸಾಧ್ವಿ, ಹರಿಕಥೆ ಪುರಾಣ ಶ್ರವಣದಲ್ಲೇ ಹೆಚ್ಚು ಆಸಕ್ತಿಯನ್ನು ತೋರಿದಳು. ಗುಲಾಬಿ ಬಣ್ಣದ ವಸ್ತ್ರಗಳನ್ನೆ ಧರಿಸುತ್ತಿದ್ದಳು. ಗರ್ಭದಲ್ಲಿರುವ ಶಿಶುವು ಶ್ರೀ ಹರಿ ಭಕ್ತನಾಗುವನೆಂದು, ಸನ್ಯಾಸಿಯಾಗುವನೆಂದು, ತಾಯಿಯ ನಡೆ ನುಡಿಗಳಿಂದ ಮುನ್ಸೂಚನೆ ಕೊಟ್ಟಂತೆ ತೋರಿತು!

ನವ ಮಾಸಗಳು ತುಂಬಲು, ಒಂದು ಶುಭ ದಿನದಲ್ಲಿ, ಶುಭ ನಕ್ಷತ್ರದಲ್ಲಿ ಗೋಪಿಕಾಂಬೆ ಸುಪುತ್ರನನ್ನು ಪ್ರಸವಿಸಿದಳು. ಶ್ರೀ ವೇಂಕಟೇಶನ ದಯದಿಂದ

ಜನಿಸಿದ ಆ ಶಿಶುವಿಗೆ ತಂದೆ, ತಾಯಿಗಳು 'ವೆಂಕಟೇಶ' ನೆಂದು ನಾಮಕರಣ ಮಾಡಿ ಲಾಲನೆಯಿಂದ ಬೆಳೆಸಿದರು. ವೆಂಕಟೇಶನು ಶುಕ್ಲಪಕ್ಷದ ಚಂದ್ರಮ ನಂತೆ ದಿನೇ ದಿನೇ ಪ್ರವರ್ಧಮಾನನಾಗಿ ಬೆಳೆದನು. ಮಾತಾಪಿತೃಗಳಿಗೆ ಆಹ್ಲಾದವನ್ನುಂಟುಮಾಡಿದನು.

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಶ್ರೀ ವಿಜಯೀಂದ್ರ ತೀರ್ಥರು, ದ್ವೈತಮತವನ್ನು ಪುನರುತ್ಥಾನಗೊಳಿಸಿದರು. ಶಿಷ್ಯನಿಗೆ ಆಶ್ರಮ ವನ್ನು ಕೊಟ್ಟು ಕುಂಭಘೋಣದಲ್ಲಿ ಬೃಂದಾವನಸ್ಥರಾದರು. ಇವರ ಮಹಾ ಸಮಾರಾಧನೆಗೆ ಪೀಠಸ್ಥರಾದ ಶ್ರೀ ಸುಧೀಂದ್ರ ತೀರ್ಥರು, ವಿದ್ವಜ್ಜನರಿಗೆ, ಆಹ್ವಾನದ ಆಜ್ಞಾಪತ್ರಗಳನ್ನು ಬೃಹಸ್ಪೀಠವನ್ನ ಲಂಕರಿಸಿದ ಯತಿ ಚಂದ್ರಮರಲ್ಲಿ ಕಳುಹಿದರು. ಪಂಡಿತ ಪ್ರಕಾಂಡರು ಬಂದು ಸೇರಿದರು. ಅವರಲ್ಲಿ ವೀಣಾ ತಿಮ್ಮಣ್ಣ ಭಟ್ಟರೊಬ್ಬರು. ತಿಮ್ಮಣ್ಣನು ತನ್ನ ಇಬ್ಬರು ಮಕ್ಕಳನ್ನು ಜೊತೆ ಯಲ್ಲಿ ಕರತಂದರು. ಶ್ರೀ ವಿಜಯೀಂದ್ರ ತೀರ್ಥರ ಮಹಾ ಸಮಾರಾಧನೆಯು ಬಹು ವಿಜೃಂಭಣೆಯಿಂದ ನಡೆಯಿತು. ಪಂಡಿತರಿಗೆ ಬಿರುದುಗಳು, ವಿಶೇಷ ವಾಗಿ ಸಂಭಾವನೆಗಳು ದೊರೆತವು. ವಿದ್ವಜ್ಜನ ಪಕ್ಷ ಪಾತಿಗಳಾದ ಯತೀಂದ್ರರ ಸನ್ನಿಧಿಯಲ್ಲಿ ಪಂಡಿತರಿಗೆ ಸತ್ಕಾರ ನಡೆಸುವುದರಲ್ಲಿ ಕೊರತೆಯಿರುವುದೇ? ವೀಣಾ ತಿಮ್ಮಣ್ಣನು, ಶ್ರೀಗಳವರನ್ನು ಪ್ರತ್ಯೇಕವಾಗಿ ಕಂಡು, ತನ್ನ ದೈನ್ಯತೆ, ಚಿಕ್ಕ ಮಕ್ಕಳ ಭವಿಷ್ಯದ ಬಗ್ಗೆ ಚಿಂತೆಯನ್ನು ವ್ಯಕ್ತಪಡಿಸಿದನು. ಆಗ ಶ್ರೀಗಳವರು "ತಿಮ್ಮಣ್ಣಾ ಚಿಂತಿಸಬೇಡ! ನಿನ್ನ ಮಕ್ಕಳು ನಿನಗಿಂತ ಚನ್ನಾಗಿ ಬಾಳುವರು. ಪಾಂಡಿತ್ಯವನ್ನು ಸಂಪಾದಿಸಿ, ಕೀರ್ತಿಯನ್ನುಗಳಿಸಿ, ಸಂಪದ್ಯುಕ್ತರಾಗುವರು. ಚಿಕ್ಕಮಗನ ಯೋಗ ಕ್ಷೇಮಗಳು ಶ್ರೀ ಮೂಲರಾಮನಿಗೆ ಸೇರಿರುತ್ತವೆ" ಎಂಬುದಾಗಿ ಸಂತೈಸಿ, ವಿಶೇಷವಾಗಿ ಧನ ಸಹಾಯವನ್ನು ಮಾಡಿ ಭಟ್ಟರನ್ನಾಶೀ ರ್ವದಿಸಿ ಕಳುಹಿದರು.

ವೆಂಕಟೇಶನಿಗೆ ತಿಮ್ಮಣ್ಣಭಟ್ಟರು ಐದನೇ ವರ್ಷದಲ್ಲಿ ಅಕ್ಷರಾಭ್ಯಾಸ ಮಾಡಿದರು. ಹುಡುಗನ ಚುರುಕುಮತಿಗೆ, ಚಮತ್ಕಾರದ ಮಾತಿಗೆ, ನೆರ ಹೊರೆಯ ಜನರು ಸಂತೋಷ ಪಡುವದನ್ನು ಕಂಡು ತಂದೆ ತಾಯಿಗಳಮಂದಾ ನಂದವನ್ನು ಹೊಂದಿದರು. ಹೀಗೆ ಕೆಲಕಾಲ ಕಳೆಯಿತು ತಿಮ್ಮಣ್ಣ ಭಟ್ಟರ

ಆರೋಗ್ಯಕೆಟ್ಟಿತು. ಕ್ರಮೇಣ, ಅಸ್ವಸ್ಥತೆ ಹೆಚ್ಚಿತು. ವಿಧಿ ವಿಲಾಸ ವಿಚಿತ್ರ ವಲ್ಲವೇ? ಭಟ್ಟರು ಇಹಲೋಕದ ವ್ಯಾಪಾರವನ್ನು ಮುಗಿಸಿದರು.

## ವಿದ್ಯಾಭ್ಯಾಸ

ತಿಮ್ಮಣ್ಣಭಟ್ಟರ ಜ್ಯೇಷ್ಠಪುತ್ರನಾದ ಗುರುರಾಜನು ಚಿಕ್ಕಪ್ರಾಯದಲ್ಲೇ ಸಂಸಾರಭಾರವನ್ನು ವಹಿಸಬೇಕಾಯಿತು. ದಾನಶೀಲರಾದ ಶ್ರೀಮಂತರಿಂದ ಧನಸಹಾಯವನ್ನು ಪಡೆದು ತಮ್ಮನಾದ ವೆಂಕಣ್ಣನಿಗೆ ಬ್ರಹ್ಮೋಪದೇಶವನ್ನು ಮಾಡಿದನು. ಅನಂತರ ವೆಂಕಟೇಶನನ್ನು ವಿದ್ಯಾಭ್ಯಾಸಕ್ಕಾಗಿ, ಭಾವನವರಾದ ಮಧುರೆ ಲಕ್ಷ್ಮೀನೃಸಿಂಹಾಚಾರ್ಯರ ಬಳಿಗೆ ಕಳಿಸಿದನು.

ವೆಂಕಟೇಶನು ವರಪ್ರಸಾದದಿಂದ ಹುಟ್ಟಿದ ಬಾಲಕನಾದ್ದರಿಂದ, ಚತುರ ಮತಿಯು ಸರ್ವಸಲ್ಲಕ್ಷಣದಿಂದ ಕೂಡಿದವನಾಗಿದ್ದನು. ಘನ ವಿದ್ವಾಂಸರಾದ ಭಾವನವರಲ್ಲಿ ವಿದ್ಯಾಭ್ಯಾಸವನ್ನು ಮಾಡಿದನು. ನಾಲ್ಕುವೇದಗಳು-ಆರು ಶಾಸ್ತ್ರಗಳು-ಅಷ್ಟಾದಶಪುರಾಣಗಳನ್ನು ಸಾಂಗವಾಗಿ ಓದಿ ಮುಗಿಸಿದನು. ಭಾವನವರ ಅಪ್ಪಣೆಪಡೆದು ಭುವನಗಿರಿಗೆ ಹಿಂದಿರುಗಿದನು.

## ವಿವಾಹ - ಸುಧೀಂದ್ರರಲ್ಲಿ ಶಿಷ್ಯವೃತ್ತಿ

ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಯೌವನದಶೆಯಲ್ಲಿರ್ಪ ವೆಂಕಟ ಭಟ್ಟನಿಗೆ ಅಣ್ಣನಾದ ಗುರುರಾಜನು, ಸದ್ವಂಶಸಂಜಾತಳು, ಗುಣವತಿ, ರೂಪವತಿ ಯಾದ ಸರಸ್ವತಿ ಎಂಬ ಕನ್ಯೆಯನ್ನು ತಂದು ವಿವಾಹವನ್ನು ಮಾಡಿದನು.

"ವಿವಾಹೋ ವಿದ್ಯಾನಾಶಾಯ"ಎಂಬುದು ಲೋಕಾಚಾರ. ಆದರೆ ಇದು ವೆಂಕಟಭಟ್ಟರ ವಿಷಯದಲ್ಲಿ ವಿರುದ್ಧವಾಯಿತು. ಶ್ರೀಮದಾಚಾರ್ಯರ ಪೀಠವನ್ನಲಂಕರಿಸಿದ ಯತಿಚಂದ್ರರಾದ ಶ್ರೀ ಸುಧೀಂದ್ರತೀರ್ಥರು ಕುಂಭ ಘೋಣದಲ್ಲಿದ್ದರಷ್ಟೆ, ಅವರು ಚತುಃಷಷ್ಟಿಕಲಾಕೋವಿದರು. ಶಿಷ್ಯರಿಗೆ ಪಾಠ ಹೇಳುವುದು, ಪಂಡಿತರನ್ನು ಸತ್ಕರಿಸುವುದು, ಪಾಮರರ ಉದ್ಧಾರಾರ್ಥವಾಗಿ, ದ್ವೈತಮತದ ಪ್ರಾಶಸ್ತ್ಯವನ್ನು ಪ್ರಚಾರಮಾಡುವುದರಲ್ಲಿ ನಿರತರಾಗಿದ್ದರು. ವೆಂಕಟಭಟ್ಟನು ವೇದಾಂತವನ್ನು ಕಲಿಯಲು ಅಣ್ಣನ ಅನುಮತಿಯನ್ನು ಪಡೆದು, ಕುಂಭಕೋಣೆಗೆ ಬಂದನು.

ವೆಂಕಟಭಟ್ಟನು ಗುರು ಸುಧೀಂದ್ರರನ್ನು ಕಂಡು, ಸಾಷ್ಟಾಂಗ ಪ್ರಣಾಮ ಮಾಡಿ ಕೈಜೋಡಿಸಿ ನಿಂತನು. ಶ್ರೀಗಳವರು ವಿಷಯವೇನೆಂದು ಪ್ರಶ್ನಿಸಿದರು. ಆಗ ವೆಂಕಟಭಟ್ಟನು.

"ಗುರುದೇವಾ ! ನಾನು ವೀಣಾತಿಮ್ಮಣಭಟ್ಟರ ಚಿರಂಜೀವಿ. ವೆಂಕಣ್ಣನೆಂದು ಕರೆವರು. ವಿದ್ವಾಂಸರಾದ ಮಧುರೆ ಲಕ್ಷ್ಮೀನೃಸಿಂಹಾಚಾರ್ಯರಲ್ಲಿ, ವೇದಶಾಸ್ತ್ರಗಳನ್ನು ಪಠಿಸಿದೆನು. ವೇದಾಂತವನ್ನು ಕಲಿಯಲು ತಮ್ಮ ಬಳಿಗೆ ಬಂದಿರುವೆ. ಅನುಗ್ರಹಿಸಬೇಕು" ಎಂಬುದಾಗಿ, ವಿನಯ ವಿವೇಕದಿಂದ ವಿಜ್ಞಾಪಿಸಿದನು. ಗುರುಗಳ ಅಪ್ಪಣೆ ದೊರೆಯಿತು !

ಬುಧ ಸುಧೀಂದ್ರರು ಶಿಷ್ಯರಿಗೆ ಶ್ರೀ ಸುಧಾಪಾಠವನ್ನು ಪ್ರಾರಂಭಿಸಿದರು. ವೆಂಕಟಭಟ್ಟನು ಶ್ರದ್ಧೆಯಿಂದ ಪಾಠವನ್ನು ಕಲಿತನು. ಹೊಸದಾಗಿ ಬಂದ ಶಿಷ್ಯನಾದ ವೆಂಕಣ್ಣನ ಶ್ರದ್ಧಾಭಕ್ತಿಗಳೊಂದಿಗೆ, ಅವನ ಬುದ್ಧಿ ಕುಶಲತೆಗೆ ಗುರುಗಳು ಮೆಚ್ಚಿದರು. ಸಂತೋಷಪಟ್ಟರು. ಅಚಿರಕಾಲದಲ್ಲೆ ಗುರ್ವನುಗ್ರಹಕ್ಕೆ ಪಾತ್ರನಾದ ವೆಂಕಣ್ಣನನ್ನು ಕಂಡರೆ, ಸಹ ಪಾಠಿಗಳಿಗೆ ಸಹಿಸದಂತಾಯಿತು. ಒಂದು ದಿನ ಏಕಾಂತದಲ್ಲಿ ಗುರುಗಳನ್ನು ಕಂಡು,

"ಗುರುದೇವಾ ! ವೆಂಕಟಭಟ್ಟನು, ಹೊಟ್ಟೆಬಾಕ–ನಿದ್ರಾಳು–ದುಷ್ಟನಿದ್ದಾನೆ ! ಅವನಿಗೆ ವಿದ್ಯೆ ಬಾರದು. ಮಠದಲ್ಲಿ ಅವನ ಊಟವು ದಂಡ, ಅವನು ನಮ್ಮ ಜೊತೆಯಲ್ಲಿ ವಿದ್ಯಾಭ್ಯಾಸಕ್ಕೂ ಅರ್ಹನಲ್ಲ. ಅವನನ್ನು ಮಠದಿಂದ ಹೊರದೂಡಿ ನಮ್ಮನ್ನು ಕಾಪಾಡಬೇಕು."

ಎಂಬುದಾಗಿ ಭಟ್ಟನ ಮೇಲೆ ಚಾಡೀಹೇಳಿದರು. ಆಗ ಸುಧೀಂದ್ರರು, ಆಗಲಿ, ಅವನ ವಿಷಯವನ್ನು ನಾವೇ ವಿಚಾರಿಸಿಕೊಳ್ಳುವೆವು. ನೀವು ನಿಶ್ಚಿಂತೆಯಿಂದಿರಬಹುದು ಎಂಬುದಾಗಿ ನುಡಿದು ಭರವಸವನ್ನಿತ್ತರು.

ಮರುದಿನ ವ್ಯಾಸಂಗಕಾಲದಲ್ಲಿ ಸುಧೀಂದ್ರರಿಗೆ, ಸುಧಾಪಾಠದಲ್ಲಿ ಒಂದು ವಾಕ್ಯಕ್ಕೆ ಸರಿಯಾದ ಅರ್ಥವು ಸ್ಫುರಿಸದೇ ಪಾಠವನ್ನು ನಿಲ್ಲಿಸಿದರು. ಬೇಗನೆ

ಪಾಠವುಗಿದುದಕ್ಕೆ ಇತರ ವಿದ್ಯಾರ್ಥಿಗಳಿಗೆ ಸಂತಸವಾಯಿತು. ಆದರೆ ಪಾಠವು ಮುಂದುವರಿಯಲಿಲ್ಲವೆಂದು ಚಿಂತಿಸಿ ವೆಂಕಟಭಟ್ಟನು ತಾನು ನಿವಸಿಸುತ್ತಿದ್ದ ಮುರುಕುಮಂಟಪಕ್ಕೆ ಬಂದನು. ಪ್ರತಿದಿನ ಕಲಿತ ಪಾಠಕ್ಕೆ ಅಂದೇ ಟಿಪ್ಪಣಿಯನ್ನು ಬರೆದು ನಿದ್ರಿಸುವುದು ವೆಂಕಟಭಟ್ಟನ ಪದ್ಧತಿಯಾಗಿದ್ದಿತು. ಅಂದು ಸಹಾ, ಸಂಶಯು ಬಂದ ಪಾಠಭಾಗವನ್ನು ಮತ್ತೊಮ್ಮೆ ಓದಿ, ಟಿಪ್ಪಣಿಯನ್ನು ಬರೆದು ತಡವಾಗಿ ವಿಶ್ರಮಿಸಿದನು

ಅದೇ ರಾತ್ರಿ, ವೆಂಕಟಭಟ್ಟನ ಬಗ್ಗೆ ಸಹಪಾಠಿಗಳು ಹೇಳಿದ ಚಾಡೀ ವಿಷಯವಾಗಿ ವಿಚಾರಿಸಲು, ಶ್ರೀ ಸುಧೀಂದ್ರರು, ಆತನು ವಾಸಿಸುತ್ತಿದ್ದ ಮುರುಕುಮಂಟಪಕ್ಕೆ ಬಂದರು. ಪಕ್ಕದಲ್ಲೆ ಬಿದ್ದಿದ್ದ ತಾಳಪತ್ರಗಳನ್ನು ತೆಗೆದು ಕೊಂಡು ನೋಡಿದರು. ಅದರಲ್ಲಿ ಸುಧೆಗೆ ಟಿಪ್ಪಣಿ ಬರೆದಿರುವುದನ್ನು ಕಂಡು ಸಂತಸಪಟ್ಟರು. ಅಂದು ಸಂಶಯವು ಬಂದ ಪಾಠಭಾಗಕ್ಕೂ ಸರಿಯಾದ ಟಿಪ್ಪಣಿಯನ್ನು ರಚಿಸಿದ ವೆಂಕಟಭಟ್ಟನನ್ನು ಅಭಿನಂದಿಸಿ, ವಾತ್ಸಲ್ಯದಿಂದ ತಮ್ಮ ಮೇಲಿದ್ದ ಶಾಲನ್ನು ತೆಗೆದು 'ಚಳಿ'ಗೆ ನಡುಗುತ್ತಿದ್ದ ಶಿಷ್ಯನಿಗೆ ಹೊದಿಸಿ, ಆ ತಾಳಪತ್ರಗಳನ್ನು ಕೈಯಲ್ಲಿಪಿಡಿದು ಮಠಕ್ಕೆ ಬಂದರು.

ಮರುದಿನ ಸುಧಾಪಾಠವು ಪ್ರಾರಂಭವಾಯಿತು. ವೆಂಕಟಭಟ್ಟನು ಕೊಂಚ ತಡವಾಗಿ ಪಾಠಕ್ಕೆ ಬಂದುದನ್ನು ಕಂಡು ಶಿಷ್ಯರು ಆಕ್ಷೇಪಿಸಿದರು. ಗುರುಗಳು ಎಲ್ಲರನ್ನು ಸಮಾಧಾನಪಡಿಸಿ,ಪಾಠವನ್ನು ಪ್ರಾರಂಭಿಸಿ, ಹಿಂದಿನ ದಿನ ಸಂಶಯವು ಬಂದ ಪಾಠಕ್ಕೆ, ವೆಂಕಟಭಟ್ಟನು ಸರಳಸುಂದರವಾದ ಟಿಪ್ಪಣಿಯನ್ನು ಬರೆದಿರುವುದನ್ನು ಶಿಷ್ಯವರ್ಗಕ್ಕೆ ವಿವರವಾಗಿ ತಿಳಿಸಿ, ತಾವು ತಮ್ಮ ಶಾಲನ್ನು ಆತನಿಗೆ ಬಹೂಕೃತಿಯಾಗಿ ಕೊಟ್ಟೆವೆಂಬುದನ್ನು ಹೇಳಿ, ಟಿಪ್ಪಣಿಗೆ, 'ಪರಿಮಳ'ವೆಂಬ ಹೆಸರನ್ನಿಟ್ಟರುತ್ತಾನೆ. ಪರಿಮಳವನ್ನು ರಚಿಸಿದ ಭಟ್ಟನಿಗೆ **ಪರಿಮಳಾಚಾರ್ಯ** ಎಂಬ ಬಿರುದಿತ್ತೆವು. ಇನ್ನಾದರೂ ಸಹಕಾರ ಸೌಹಾರ್ದದಿಂದ ಶಿಷ್ಯರೆಲ್ಲರೂ ಕೂಡಿ ವರ್ತಿಪುದೆಂಬುದಾಗಿ ಆದೇಶವನ್ನಿತ್ತರು. ಅಂದಿನಿಂದ ಇತರ ಶಿಷ್ಯರು ಭಟ್ಟರನ್ನು ಕಂಡರೆ ಗೌರವಾದರಗಳನ್ನು ತೋರಿಸಿ,ಅವರಲ್ಲಿ ತೋರಿದ ಮಾತ್ಸರ್ಯವನ್ನು ಬಿಟ್ಟರು.

## ಗುರುಗಳ ಸಂಚಾರ - ಶಿಷ್ಯನಿಗೆ ವಿಜಯ

ಶ್ರೀ ಸುಧೀಂದ್ರರು ಚತುಷ್ಷಷ್ಠಿ ಕಲಾಕೋವಿದರು. ಪಂಡಿತರಿಗೆ ಸಂಶಯವನ್ನು ನಿವಾರಿಸಿ ಜ್ಞಾನ, ಭಕ್ತಿ, ವೈರಾಗ್ಯಾದಿ ವಿಷಯಕವಾಗಿ ಉಪನ್ಯಾಸ ಮಾಡುವುದಲ್ಲದೆ, ವಿಷ್ಣುತತ್ವವನ್ನು ಬೋಧಿಸುತ್ತಾ ಪಾಮರಜನೋದ್ಧಾರಕ್ಕಾಗಿ ಸಂಚಾರವನ್ನು ಮಾಡುತ್ತಿದ್ದರು. ಗುರುಗಳ ಜೊತೆಯಲ್ಲಿ ವೆಂಕಟ ಭಟ್ಟನು ಸಂಚಾರಕ್ಕೆ ಹೊರಟನು. ಶ್ರೀಗಳವರು, ಹಳ್ಳಿಗಳು, ನಗರಗಳು, ಮುಖ್ಯಸ್ಥಳಗಳು, ಪುಣ್ಯಸ್ಥಳಗಳು ಸಂಚರಿಸಿ, ದಕ್ಷಿಣ ಮಧುರೆಗೆ ಬಂದರು. ಅಲ್ಲಿ ಶ್ರೀಮಂತರು, ವಿಶೇಷವಾಗಿ ಧನವನ್ನು ಕೊಟ್ಟು 'ಭಿಕ್ಷೆ' ಮಾಡಿಸಿದರು. ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ, ಫಲಮಂತ್ರಾಕ್ಷತೆ, ಆಶೀರ್ವಾದಗಳನ್ನು ಪಡೆದು ಕೃತಾರ್ಥರಾದರು. ತೃಪ್ತಿಯನ್ನು ವ್ಯಕ್ತಗೊಳಿಸಿದರು.

ಶ್ರೀ ಸುಧೀಂದ್ರರ ವೈಭವವನ್ನು ನೋಡಿ, ಅವರ ಪಾಂಡಿತ್ಯವನ್ನು ಕೇಳಿ, ಮಧುರಾನಗರನಿವಾಸಿಯಾದ, ದ್ರವಿಡಸನ್ಯಾಸಿಯೊಬ್ಬನು ಮಾತ್ಸರ್ಯದಿಂದ, ಶ್ರೀಗಳವರೊಡನೆ ವಾದಮಾಡಲು ನಿಶ್ಚಯಿಸಿ, ಶ್ರೀಗಳನ್ನು ಕಂಡು, ತನ್ನ ಅಭಿಪ್ರಾಯವನ್ನು ತಿಳಿಸಿ ಅವರ ಒಪ್ಪಿಗೆ ಪಡೆದನು.

ಮರುದಿವಸ ಸಭೆ ಸೇರಿತು. ದ್ರವಿಡಸನ್ಯಾಸಿ ವಾದಿ. ಚರ್ಚನೀಯಾಂಶವು **ವ್ಯಾಕರಣ ಮಹಾಭಾಷ್ಯ**, ವಾದಿಯು ದೊಡ್ಡ ಪಂಡಿತನು. ವಿಷಯವನ್ನು ಚೆನ್ನಾಗಿ ತಿಳಿದವನು. ಪರಿಮಳಾಚಾರ್ಯ ಬಿರುದನ್ನು ಪಡೆದ ವೆಂಕಟಭಟ್ಟನೇ ಪ್ರತಿವಾದಿಯಾಗಿ ನಿಯಮಿಸಲ್ಪಟ್ಟರು. ವೀಣಾವೆಂಕಣ್ಣನು ಚತುರ. ತರ್ಕ ವೇದಾಂತಗಳು ಆತನ ಆಸ್ತಿ. ವಿದ್ವಾಂಸರಿಬ್ಬರು ವಾದಕ್ಕಿಳಿದರು. ಪಂಡಿತರು, ಸಭಿಕರು ಕುತೂಹಲದಿಂದ ವಾದ ಪ್ರತಿವಾದಗಳನ್ನು ಕೇಳಿದರು. ಶಿಷ್ಯನ ಪ್ರತಿಭೆಗೆ ಶ್ರೀಗಳವರಾನಂದಪಟ್ಟರು. ಹಾಗೆ ವಾದವು ಹದಿನೆಂಟ ದಿನಗಳು ಜರುಗಿತು. ವಿಜಯಲಕ್ಷ್ಮಿಯು ವೆಂಕಟಭಟ್ಟನನ್ನೇವರಿಸಿದಳು, ಭಟ್ಟರಿಗೆ

ಮಹಾಭಾಷ್ಯದಲ್ಲಸಮಾನ ಪಾಂಡಿತ್ಯವಿರುವುದನ್ನು ಕಂಡು, ಶ್ರೀ ಸುಧೀಂದ್ರರು ವೆಂಕಟ ಭಟ್ಟರಿಗೆ **ಮಹಾಭಾಷ್ಯಾಚಾರ್ಯನೆಂಬ** ಬಿರುದಿತ್ತು ಗೌರವಿಸಿದರು.

ತಂಜಾವೂರು ಸಂಗೀತವಿದ್ಯೆಗೆ ತವರೂರು. ಉಭಯ ಭಾಷಾಪ್ರವೀಣನಾದ **ರಘುನಾಥರಾಯನು**, ಆ ಪ್ರಾಂತಕ್ಕೆ ಅರಸನಾಗಿದ್ದನು ಆತನು, ಕವಿ–ರಸಿಕ–ಲಲಿತ ಕಳಾಭಿಮಾನಿ.

ಸಂಚಾರದಲ್ಲಿದ್ದ ಶ್ರೀ ಸುಧೀಂದ್ರರನ್ನು ರಘುನಾಥರಾಯನು, ಸಪರಿವಾರದಿಂದ ಹೊರಟು, ರಾಜಮರ್ಯಾದೆಗಳಿಂದ ಸ್ವಾಗತಿಸಿ ಕರೆತಂದನು. ಕೆಲಕಾಲ ರಾಜಧಾನಿಯಲ್ಲೇ ಗುರುಗಳು ಬಿಡಾರ ಮಾಡಿದರು.

ರಘುನಾಥ ಭೂಪಾಲನ ಮಂತ್ರಿ **ಗೋವಿಂದ ದೀಕ್ಷಿತನು**. ಬಹು ಚತುರ. ಆತನ ಮಗನಾದ **ಯಜ್ಞನಾರಾಯಣದೀಕ್ಷಿತನು** ಅದ್ವೈತದಲ್ಲಿ ದೊಡ್ಡ ಪಂಡಿತ. ಸುಪ್ರಸಿದ್ಧ ವಿದ್ವಾಂಸರಾದ ವೆಂಕಟಭಟ್ಟರ ಜೊತೆ ವಾದಕ್ಕೆ ಸಿದ್ಧನಾದನು. ಸುಧೀಂದ್ರರ ಸಮ್ಮತಿಯನ್ನು ಪಡೆದನು.

ಮರುದಿವಸ ಶ್ರೀ ಸುಧೀಂದ್ರರನ್ನು ಸಭಾಧ್ಯಕ್ಷರನ್ನಾಗಿ ಮಾಡಿ, ರಘುನಾಥರಾಯನು ವಿದ್ವದ್ಗೋಷ್ಠಿಯನ್ನು ಕೇಳಿದನು. ದೀಕ್ಷಿತನು, ಜೀವೇಶ್ವರರಿಗೆ, ಭೇದವಿಲ್ಲ-ಜೀವನು ಭಿನ್ನನಲ್ಲ. ಅಹಂಬ್ರಹ್ಮಾಸ್ಮಿ ಎಂಬುದಾಗಿ, ಅದ್ವೈತವನ್ನು ರೂಪಿಸಲು ಪ್ರಯತ್ನಿಸಿದ. ವೆಂಕಟ ಭಟ್ಟನು, ಬಾಧೆ, ದುಃಖಗಳನ್ನನುಭವಿಸುವ ಜೀವನು ಬೇರೆ, ಸಚ್ಚಿದಾನಂದನಾದ ಪರಮಾತ್ಮನು ಬೇರೆ. "ತತ್ವಮಸಿ" ಆದಿವಿಷಯಗಳನ್ನು ಚರ್ಚಿಸಿ-ಪಂಚಭೇದ ತಾರತಮ್ಯವನ್ನು ರೂಪಿಸಿ, ಅನುಭವ ಪ್ರಮಾಣ, ಪ್ರತ್ಯಕ್ಷಗಳ ಆಧಾರದಿಂದ ದ್ವೈತಮತವನ್ನು ಸ್ಥಾಪಿಸಿದನು. ಜಯವು ವೆಂಕಟಭಟ್ಟರದೆಂದು ದೀಕ್ಷಿತನು ತನ್ನ ಪರಾಭವವನ್ನು ಸಹಜಪಂಡಿತ ರೀತಿಯಲ್ಲಿ ಒಪ್ಪಿಕೊಂಡನು. ಪ್ರಭುವು, ಪಂಡಿತರು, ವೆಂಕಟ ಭಟ್ಟರ ಪಾಂಡಿತ್ಯವನ್ನು ಕೊಂಡಾಡಿದರು. ಶ್ರೀ ಸುಧೀಂದ್ರರು ಆಗ ಪ್ರಜ್ಞಾನಿಧಿಯು, ಪ್ರತಿಭಾಶಾಲಿಯು ಆದ ಶಿಷ್ಯನಿಗೆ "**ಭಟ್ಟಾಚಾರ್ಯ**"ಎಂಬ ಬಿರುದಿತ್ತು

ಗೌರವಿಸಿದರು. ವೀಣಾ ವೆಂಕಣ್ಣನು ಈಗ ಮಹಾಭಾಷ್ಯ ಪರಿಮಳ ವೆಂಕಟ ಭಟ್ಟಾಚಾರ್ಯನಾದನು. ಗುರುಸುಧೀಂದ್ರರ ಆಸ್ಥಾನ ವಿದ್ವಾಂಸ ನಾಗಿ ಎಲ್ಲರ ಗೌರವಾದರಾಭಿಮಾನಗಳಿಗೆ ಪಾತ್ರನಾದನು.

## ಸಂಸಾರ

ಶ್ರೀ ಸುಧೀಂದ್ರರ ಅಪ್ಪಣೆ ಪಡೆದು ವೆಂಕಟ ಭಟ್ಟನು ಭುವನಗಿರಿಗೆ ಹಿಂದಿರುಗಿದನು. ಸತಿಸರಸ್ವತಿ ಸದಾಪತಿಸೇವೆಯಲ್ಲಿ ನಿರತಳಾದಳು. ಭಟ್ಟರ ಸಂಸಾರವನ್ನು ಸುಖಮಯ ಹಾಗು ಸಾರಮಯವನ್ನಾಗಿ ಮಾಡಿದಳು. ಅಚಿರ ಕಾಲದಲ್ಲೆ ಅವರಿಗೆ ಪುತ್ರಪ್ರಾಪ್ತಿಯಾಯಿತು. ಭಟ್ಟರಿಗೆ ಹಿರಿಯರ ಆಸ್ತಿ ಇಲ್ಲ. ತನ್ನ ಸಂಪಾದನೆ ಕುಟುಂಬ ಪೋಷಣೆಗೆ ಸಾಲದಾಯಿತು. ಘನವಿದ್ವಾಂಸರಾದ ಭಟ್ಟರ ಶಿಷ್ಯಬೃಂದವು ದೊಡ್ಡದಾಯಿತು. ಆಕಾಲದಲ್ಲಿ ಶಿಷ್ಯರ ಪೋಷಣೆಯು ಗುರುವಿನದಾಗಿತ್ತು. ದಾರಿದ್ರ್ಯದಿಂದ ಭಟ್ಟರ ಸಂಸಾರದಲ್ಲಿ ಮೇಲಿಂದ ಮೇಲೆ ತೊಂದರೆಗಳುಬರುತ್ತಲಿದ್ದವು. ಭಟ್ಟರ ದಾರಿದ್ರ್ಯಕೆ **'ವೆಂಕಟಾಭಿದವೇ'** ಕಾರಣವೆಂದು ತಿಳಿದು ಬಾಧೆಪಟ್ಟರು. ಮಗನಾದರು ತಮ್ಮಂತೆ ಕಷ್ಟಪಡದೆ ಸುಖವಾಗಿರಲೆಂದು ಬಯಸಿ ಅವನಿಗೆ **ಲಕ್ಷ್ಮೀನಾರಯಣ**ನೆಂದು ನಾಮಕಾರಣ ಮಾಡಿದರು.

ವೆಂಕಟ ಭಟ್ಟರು ಪ್ರತಿದಿನ ದೇವಪೂಜಾದಿ ವಿಧಿಗಳನ್ನು ಮುಗಿಸಿಕೊಂಡು, ಶಿಷ್ಯರಿಗೆ ಪಾಠ ಪ್ರವಚನಗಳನ್ನು ಮಾಡಿ, ಬಡತನದಲ್ಲೇ ಕಾಲಕಳೆದರು. ಹೀಗಿರಲು, ಒಂದು ದಿನ ಸಮೀಪದಲ್ಲಿದ್ದ ಹಳ್ಳಿಯಲ್ಲಿ ಓರ್ವ ಶ್ರೀಮಂತನ ಮನೆಯಲ್ಲಿ ಶುಭಕಾರ್ಯವು ಜರುಗುವ ವಿಷಯತಿಳಿದುಬಂದಿತು. ಸತಿಸರಸ್ವತಿಯು ಪತಿದೇವನ ಸನ್ನಿಧಿಯನ್ನು ಸೇರಿ ಶ್ರೀಮಂತರ ಮನೆಗೆ ಶುಭಮುಹೂರ್ತಕ್ಕೆ ಹೋಗಿ ಆತನಿಂದ ಧನಸಹಾಯವನ್ನು ಪಡೆದು ಬರಬೇಕೆಂದು ಬೇಡಿಕೊಂಡಳು. ಆದರಿಂದಾಗಿ ತಮ್ಮ ಕುಟುಂಬದ ಕಷ್ಟಗಳು ಪರಿಹಾರವಾಗುವುವೆಂದು ಸೂಚಿಸಿದ ಸತೀಮಣಿಯ ಮಾತನ್ನು ಲಾಲಿಸಿ, ಕೃಷ್ಣನನ್ನು ನೋಡಲುಹೋದ ಕುಚೇಲನಂತೆ, ಭಟ್ಟರು ಶ್ರೀಮಂತನನ್ನು ಕಾಣಲು ಪ್ರಯಾಣಬೆಳಸಿದರು.

ಶ್ರೀಮಂತನು, ಸಾತ್ವಿಕನು. ಆತನದು ದೊಡ್ಡಮನಸ್ಸು. ಅಂದು ಅವರ ಮನೆಗೆ, ಸಾವಿರಾರು ಮಂದಿ ಬ್ರಾಹ್ಮಣರು ಬಂದಿದ್ದರು. ಅವರಲ್ಲಿ ವೆಂಕಟಭಟ್ಟನೊಬ್ಬನು. ಭಟ್ಟನು ಸ್ನಾನಸಂಧ್ಯಾದಿ ವಿಧಿಗಳನ್ನು ಮುಗಿಸಿಕೊಂಡು ಪಾರಾಯಣಕ್ಕೆ ಕುಳಿತನು. ಆ ಮನೆಯ ಪುರೋಹಿತನಿಗೆ ಆತುರ, ಹಡಾವಿಡಿ ಹೆಚ್ಚು-ಆಲೋಚನೆ ಕಮ್ಮಿ. ಮೂಲೆಯಲ್ಲಿದ್ದ ಭಟ್ಟರನ್ನು ನೋಡಿ, ಮಾತನಾಡಿ ಬ್ರಾಹ್ಮಣ ಸಮೂಹಕ್ಕೆ ಸಾಕಾಗುವಷ್ಟು ಗಂಧವನ್ನು ಬೇಗನೆತೆಗೆದು ಸಿದ್ಧಪಡಿಸ ಬೇಕೆಂದು ಕಟ್ಟಪ್ಪಣೆ ಮಾಡಿದನು.

ಪಾಂಡಿತ್ಯಕ್ಕೆ ತಕ್ಕ ಗೌರವ ದೊರೆಯದೆ, ಗಂಧ ತೆಗೆಯುವಶಿಕ್ಷೆವಿಧಿಸಿದು ದಕ್ಕಾಗಿ ವೆಂಕಟ ಭಟ್ಟನು ಬೇಸರಗೊಂಡನು. ವಿಧಿಯಿಲ್ಲದೆ ಗಂಧವನ್ನುತೆಗೆದು ಸಿದ್ಧಪಡಿಸಿದನು. ಪುರೋಹಿತನು ಗಂಧವನ್ನು ದೇವನಿಗೆ ಅರ್ಪಿಸದೆ ಬ್ರಾಹ್ಮಣ ಸಮೂಹಕ್ಕೆ ಹಂಚಿದನು. ವಿಪ್ರರು ಗಂಧವನ್ನು ಲೇಪಿಸಿಕೊಂಡು, ಉರಿ, ಮೈಉರಿ ಗಂಧಲೇಪನದಿಂದ ಉರಿ ಉಂಟಾಯಿತೆಂದರು. ಮನೆಯ ಯಜಮಾನನು ಪುರೋಹಿತರಿಂದ ಕೂಡಿ ವೆಂಕಟ ಭಟ್ಟನನ್ನು ವಿಚಾರಿಸಲು, ಭಟ್ಟರು ಪಾರಾಯಣ ಮಾಡುತ್ತ ಗಂಧವನ್ನುತೆಗೆದೆ, ಆಗ ಅಗ್ನಿಸೂಕ್ತವನ್ನು ಮುಗಿಸಿದೆ. ಅದರ ಫಲಿತವೇ ಗಂಧಲೇಪನದಿಂದ ತಾಪಕ್ಕೆಕಾರಣವಾಯಿತು. ಎಂಬುದಾಗಿ ನುಡಿದು, ಪುನಃ ವರುಣಸೂಕ್ತದಿಂದ ಗಂಧವನ್ನು ತೆಗೆದುಕೊಟ್ಟು ಬ್ರಾಹ್ಮಣರತಾಪವನ್ನು ಕಳೆದನು ! ಅನಂತರ ಸಂತರ್ಪಣೆನಡೆಯಿತು.

ಭೋಜನಾನಂತರದಲ್ಲಿ ಶ್ರೀಮಂತನು, ವೆಂಕಟ ಭಟ್ಟರನ್ನು ಕಂಡು, ಮಾತನಾಡಿ, ನೂರುರೂಪಾಯಿಗಳನ್ನು ಕೊಟ್ಟು ತನ್ನ ಪುರೋಹಿತನಿಂದಾದ ಅಪಚಾರಕ್ಕಾಗಿ ಕ್ಷಮೆಬೇಡಿದನು.

## ಭಟ್ಟರ ದಾರಿದ್ರ್ಯ

ಶ್ರೀಮಂತನು ಕೊಟ್ಟನೂರು ರೂಪಾಯಿಗಳಿಂದ ಭಟ್ಟರ ಸಂಸಾರದಲ್ಲಿ ಸದ್ಯದ ತೊಂದರೆಗಳು ತೀರಿದವು. ಕೆಲಕಾಲ ಕಳೆಯಿತು. ಪುನಃ ತೊಂದರೆಗಳು ಬಂದೊದಗಿದವು. ಭಟ್ಟರ ದಾರಿದ್ರ್ಯಕ್ಕೆ ದಾರಿದ್ರ್ಯವಿರಲಿಲ್ಲ. ಅದು ಹೀಗಿದ್ದಿತು

ಆರು ತಿಂಗಳಾದರಭ್ಯಂಜನವೆಯಿಲ್ಲ
ಕಟ್ಟಿಕೊಳಲು ಗಟ್ಟಿ ಬಟ್ಟೆಯಿಲ್ಲ.
ಭದ್ರವಾದ ಅಡುಗೆ ಪಾತ್ರೆಯು ಒಂದಿಲ್ಲ
ಉಣ್ಣಲಾದರಿಲ್ಲ ಹೊಟ್ಟೆತುಂಬ.

ಉಗಾದಿ-ವಿಜಯದಶಮಿ - ದೀಪಾವಳಿಗಾದರೂ ಅಭ್ಯಂಜನಕ್ಕೆ ಭಟ್ಟರ ಮನೆಯಲ್ಲಿ ಸೌಕರ್ಯವಿರಲಿಲ್ಲ. ಎಲ್ಲಾ ಹರಕುಬಟ್ಟೆಗಳು-ಮುರುಕುಪಾತ್ರೆಗಳು. ಎರಡು ಹೊತ್ತು ಉಣ್ಣಲು ಸಹಾ ಸಾಮಗ್ರಿಗಳಿಲ್ಲ. ಇಂಥಾ ದಾರಿದ್ರ್ಯದಲ್ಲಿ ಭಟ್ಟರ ಮನೆಯಲ್ಲಿ ಕಳುವಾಯಿತು. ಹರಕುಬಟ್ಟೆಗಳು ವಡಕಪಾತ್ರೆಗಳು ಕಳ್ಳರ ಪಾಲಾದವು. ಹೀಗಾದುದಕ್ಕೆ ಸರಸ್ವತಿಯು ಮಮ್ಮಲಮರುಗಿದಳು. ಭಟ್ಟರು ಸತಿಯನ್ನು ಸಮಾಧಾನಪಡಿಸಿ ಸತೀಸುತರನ್ನು ಕರೆದುಕೊಂಡು ಕುಂಭ ಕೋಣೆಗೆ ಪ್ರಯಾಣ ಬೆಳಸಿದರು. ಶ್ರೀ ಸುಧೀಂದ್ರರನ್ನು ಕಂಡು, ಸಾಷ್ಟಾಂಗ ಪ್ರಣಾಮಮಾಡಿ, ಜರುಗಿಹೋದ ಘಟನೆಗಳನ್ನು ವಿಜ್ಞಾಪಿಸಿನಿಂತರು. ಆಗ ಗುರುಗಳು.

"ವೆಂಕಣ್ಣಾ ಚಿಂತಿಸಬೇಡ! ಹರೀಚ್ಛೆಯಂತೆ ನಡೆದಿದೆ. ಕುಟುಂಬಸಮೇತ ನಾಗಿ ನೀನು ಶ್ರೀ ಮಠದಲ್ಲೇ ವಾಸವಾಗಿರು. ಶಿಷ್ಯರಿಗೆ, ಪಾಠ ಪ್ರವಚನಗಳನ್ನು ಮಾಡಿಕೊಂಡಿರು. ತೀರ್ಥಪ್ರಸಾದಗಳು ಮಠದಲ್ಲೇ ನಡೆಯಲಿ. ನಿನಗೆ ಯಾವತೊಂದರೆ ಆಗದಂತೆ ನಾವು ನೋಡಿಕೊಳ್ಳುವೆವು" ಎಂಬುದಾಗಿ ಹಿತವಚನ ಗಳನ್ನು ನುಡಿದು ಭಟ್ಟನನ್ನು ಸಮಾಧಾನ ಪಡಿಸಿದರು.

## ಸನ್ಯಾಸ

ಗುರುಸುಧೀಂದ್ರರ ಅಪ್ಪಣೆಯಂತೆ ವೆಂಕಟಭಟ್ಟರು ಶ್ರೀ ಸುಧಾದಿ ಸಚ್ಛಾಸ್ತ್ರ ಪ್ರವಚನರತರಾಗಿ, ಶಿಷ್ಯರಿಗೆ ಪಾಠ ಹೇಳುತ್ತಾ ಸಕುಟುಂಬವಾಗಿ ಮಠದಲ್ಲೇ ವಾಸಿಸುತ್ತಿದ್ದರು. ಹೀಗೆ ಕೆಲಕಾಲಕಳೆಯಿತು ಶ್ರೀಗಳವರ ಆರೋಗ್ಯವು ಕೆಟ್ಟಿತು. ಶ್ರೀ ಮೂಲರಾಮರ ಪೂಜೆಗೆ ತೊಂದರೆ ಆಗಬಾರದೆಂದು, ವೆಂಕಟಭಟ್ಟ ಕರೆಯಿಸಿ ಹೀಗೆಂದರು.

"ಆಚಾರ್ಯಾ! ನಮ್ಮ ಆರೋಗ್ಯವು ಹಿತಕರವಾಗಿಲ್ಲವಷ್ಟೆ. ಸಾರಹೀನವಾದ ಸಂಸಾರದಲ್ಲಿ ಭ್ರಾಂತಿಯನ್ನು ತೊರೆದು, ಲೋಕಹಿತಾರ್ಥವಾಗಿ ಸನ್ಯಾಸವನ್ನು ಸ್ವೀಕರಿಸು. ನೀನು ಸಮರ್ಥನಿದ್ದೀಯೆ. ನಮ್ಮ ಇಚ್ಛೆಯನ್ನು ಪೂರ್ಣ ಮಾಡಬೇಕೆಂ"ದರು.

ಪರಿಮಳಾಚಾರ್ಯನು ಸ್ವಲ್ಪ ಹೊತ್ತು ಆಲೋಚಿಸಿ ಅನಂತರ ಹೀಗೆ ವಿಜ್ಞಾಪಿಸಿದನು.

"ಹೆಂಡತಿ ಇನ್ನೂ ಚಿಕ್ಕವಳು – ಮಗನು ಶೈಶವಾವಸ್ಥೆಯಲ್ಲಿದ್ದಾನೆ. ನನ್ನ ಮೇಲೆ ಆಧಾರ ಪಟ್ಟಿರುವ ಸತಿಸುತರನ್ನು ಬಿಟ್ಟು ಸನ್ಯಾಸಿಯಾಗಲು ಮನಸ್ಸು ಒಪ್ಪದು. ದಯಮಾಡಿ ನನ್ನನ್ನು ಕ್ಷಮಿಸಬೇಕೆಂದು" ಬಿನ್ನವಿಸಿ ಶ್ರೀಗಳಿಗೆ ಸಾಷ್ಟಾಂಗ ಪ್ರಣಾಮಮಾಡಿ ಅಲ್ಲಿಂದ ಹೊರಟುಹೋದನು ಆಗ ಶ್ರೀಗಳವರು, ಬೇರೊಬ್ಬ ಶಿಷ್ಯನಿಗೆ ಆಶ್ರಮವನ್ನಿತ್ತು ಯಾದವೇಂದ್ರನೆಂದು ಕರೆದರು. ಆದರೆ, ನಾಲ್ಕಾರು ದಿನಗಳಲ್ಲಿ ಶ್ರೀ ಸುಧೀಂದ್ರರ ಆರೋಗ್ಯ ಉತ್ತಮವಾಯಿತು. ಮೊದಲಿನಂತೆ ದೇವತಾರ್ಚನೆ ಪಾಠಪ್ರವಚನೆಯಲ್ಲಿ ನಿರತರಾದರು. ನೂತ್ನ ಯತಿಯನ್ನು ಸಂಚಾರಕ್ಕಾಗಿ ಕಳಿಸಿದರು.

ಶ್ರೀ ಸುಧೀಂದ್ರರು ಪಾಠಪ್ರವಚನಗಳನ್ನು ಮುಗಿಸಿಕೊಂಡು, ಶ್ರೀ ಮೂಲ ರಾಮಾರ್ಚನೆ ಮಾಡಿ ತೀರ್ಥಪ್ರಸಾದಗಳನಂತರ ವಿಶ್ರಾಂತಿಪಡೆಯುತ್ತಿದ್ದರು. ಹೀಗೆ ಕೆಲಕಾಲ ಕಳೆಯಿತು. ಮತ್ತೆ ದೇಹಾಲಸ್ಯವಾಯಿತು. ಯಾದವೇಂದ್ರರು ಸಂಚಾರದಲ್ಲಿರುವುದರಿಂದ ದೇವ ಪೂಜಾದಿವಿಧಿಗಳಿಗೆ ತೊಂದರೆ ಆಗುವುದೆಂದು ಶಂಕಿಸಿದರು. ಅಸ್ವಸ್ಥತೆ ಹೆಚ್ಚಿತು. ವಿಚಾರಮಗ್ನರಾದರು. ಒಂದು ರಾತ್ರಿ ಸುಧೀಂದ್ರರಿಗೆ ಸ್ವಪ್ನದಲ್ಲಿ ಶ್ರೀರಾಮಚಂದ್ರನು ದರ್ಶನವಿತ್ತು ತನ್ನ ಪೂಜೆಯನ್ನು

ಮಾಡಲು ಪರಿಮಳಾಚಾರ್ಯನೆ ಯೋಗ್ಯನಿರುವನು. ಆತನಿಗೆ ಆಶ್ರಮವನ್ನು ಕೊಡಬೇಕೆಂದು ಸೂಚಿಸಿದನು. ದೇವ ದೇವನ ಕೃಪೆಗೆ ಪಾತ್ರನಾದ ಪರಿಮಳಾ ಚಾರ್ಯನ ಭಾಗ್ಯವೇ ಭಾಗ್ಯವೆಂದು, ನೆನೆದು ಆಶ್ಚರ್ಯಾನಂದಗಳಿಂದ ಮುಗ್ಧ ರಾದರು.

ಅದೇ ದಿನ ರಾತ್ರಿ ವೆಂಕಟಭಟ್ಟರಿಗೆ ಶ್ರೀ ಶಾರದೆಯು ದರ್ಶನವಿತ್ತು

"ಆಚಾರ್ಯಾ, ಶ್ರೀ ಮೂಲರಾಮನು ನಿನ್ನ ಸೇವೆಯನ್ನು ಸ್ವೀಕರಿಸಲು ಕಾದಿರುವನು. ನಿನ್ನಿಂದ ಮಧ್ವಮತವು ಅಭಿವೃದ್ಧಿಯನ್ನು ಪಡೆಯಬೇಕಾಗಿದೆ. ಸನ್ಯಾಸವನ್ನು ಸ್ವೀಕರಿಸಿ ಲೋಕೊದ್ಧಾರವನ್ನು ಮಾಡು. ನನ್ನ ಮಾತನ್ನು ಲಾಲಿಸು ಎಂಬುದಾಗಿ ಭಟ್ಟನಿಗೆ ಕರ್ತವ್ಯವನ್ನು ಬೋಧಿಸಿದಳು. ಭಟ್ಟರಿಗೆ ಎಚ್ಚರವಾಯಿತು. ಈಶ್ವರೇಚ್ಛೆಯನ್ನು ನೆನೆದು ಪುಲಕಿತಗಾತ್ರನಾದನು.

ಮರುದಿನ ಪ್ರಾತಃಕಾಲದಲ್ಲೇ ಕಾರ್ಯಗಳನ್ನು ಮುಗಿಸಿಕೊಂಡು ವೆಂಕಟ ಭಟ್ಟನು ಶ್ರೀ ಮಠಕ್ಕೆ ಬಂದು ಗುರು ಸುಧೀಂದ್ರರಿಗೆ ಸಾಷ್ಟಾಂಗವೆರಗಿ ಕೈಜೋಡಿಸಿ ನಿಂತನು. ಸ್ವಪ್ನವೃತ್ತಾಂತವನ್ನು ಗುರುಶಿಷ್ಯರಿಬ್ಬರು ನೆನೆದು ಮುಗ್ಧರಾದರು. ಭಟ್ಟನು, ಚಿರಂಜೀವಿಯ ಬ್ರಹ್ಮೋಪದೇಶಕ್ಕೆಂದು ವಿಶೇಷವಾಗಿ ಧನಸಹಾಯವನ್ನು ಪಡೆದು ಹೊರಟುಹೋದನು.

ವೆಂಕಟಾರ್ಯರು ಶ್ರೀಗಳವರ ಸಮಕ್ಷಮದಲ್ಲಿ ಶುಭಮುಹೂರ್ತದಲ್ಲಿ ಚಿರಂಜೀವಿ ಲಕ್ಷ್ಮೀನಾರಾಯಣನಿಗೆ ಮೌಂಜೀಧಾರಣವನ್ನು ಮಾಡಿದರು. ಗುರು ಸುಧೀಂದ್ರರು, ವಟುವಿಗೆ ಬ್ರಹ್ಮೋಪದೇಶವನ್ನು ಮಾಡಿದರು. ಉಪನ ಯನಾನಂತರ, ಅಕ್ಕ, ಭಾವ, ಅಣ್ಣ, ಅತ್ತಿಗೆ ಮೊದಲಾದ ಬಂಧುಗಳು ತಮ್ಮ ತಮ್ಮ ಗ್ರಾಮಗಳಿಗೆ ಪ್ರಯಾಣವಾದರು. ಒಂದು ದಿನ ಭಟ್ಟರು ಸತಿಸರಸ್ವತಿ ಯನ್ನು ಕರೆದು ಗೃಹಕೃತ್ಯಗಳನ್ನು ಮಾತನಾಡಿ,

"ಪ್ರೇಯಸೀ ! ಸಂಸಾರವು ಸಾರಹೀನವಾದುದು. ಸುಖವೆಂಬುದನ್ನೆ ಕಾಣೆ. ದುಃಖಮಯವಾದುದಾಗಿದೆ. ವಿವೇಕಿಯಾದವನು ಸಂಸಾರದಿಂದ ಪಾರಾಗಬೇಕು ! ನೀನು ನನಗೆ ಸರ್ವ ವಿಧವಾಗಿ ಸೇವೆ ಮಾಡಿ ತೃಪ್ತಿಪಡಿಸಿದಿ. ಉಭಯವಂಶಗಳಿಗೆ ಕೀರ್ತಿ ತಂದಿರುವಿ. ವಂಶೋದ್ಧಾರಕನಾದ ಪುತ್ರನು ಜನಿಸಿದನು. ದಯಾಸಮುದ್ರರಾದ ಗುರುಗಳ ದಯೆಯಿಂದ ಅವನ ಉಪ ನಯನವು ಚನ್ನಾಗಿ ನಡೆಯಿತು. ಗುರುಗಳು ನನಗೆ ನಾನಾ ವಿಧವಾಗಿ ಸಹಾಯ ಮಾಡಿದ ಹಿತೈಷಿಗಳು. ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಅವರ ಮಾತು ಮೀರಲಾರೆ. ಹರೀಚ್ಛೆಯು ಅವರಿಗೆ ಅನುಕೂಲವಾಗಿದೆ. ನನಗೆ ಸನ್ಯಾಸವು ತಪ್ಪದು. ನನ್ನ ಮೇಲಿನ ಮಮಕಾರವನ್ನು ಬಿಟ್ಟು, ಸುಕುಮಾರನನ್ನು ನೋಡಿ ಆನಂದಪಡು. ಬೇಸರದಲ್ಲಿ, ಪ್ರಮಾದ ಕಾರ್ಯ ಗಳಿಗೆ ಗುರಿಯಾಗಬೇಡ ! ಚಿಂತಿಸಬೇಡ ಎಂಬುದಾಗಿ ಸತಿಯನ್ನು ಸಂತೈಸಿ ದರು. ಸರಸ್ವತಿಯು ತಡೆಯಲಾಗದ ದುಃಖದಲ್ಲಿ ಧಾರಾಕಾರವಾಗಿ ದುಃಖ ಭಾಷ್ಪಗಳನ್ನು ಸುರಿಸಿದಳು.

ವೆಂಕಟಭಟ್ಟರು ಸತೀಸುತರನ್ನು ಅಣ್ಣನಾದ ಗುರುರಾಜನಲ್ಲಿ ಬಿಟ್ಟು ಬಂದರು. ಗುರುಸುಧೀಂದ್ರರ ಜೊತೆ ತಂಜಾಪುರಕ್ಕೆ ಪ್ರಯಾಣವಾದರು. ರಘುನಾಥ ಭೂಪಾಲನು ಶ್ರೀಗಳವರ ಬರುವಿಕೆಯನ್ನು ತಿಳಿದು, ಮಂಗಳವಾದ್ಯ ಗಳಿಂದ ಹೊರಟು ಗುರುಗಳನ್ನು ಸ್ವಾಗತಿಸಿದನು. ಶ್ರೀಗಳವರು ರಾಜನಿಗೆ ವಿಷಯವನ್ನು ತಿಳಿಸಿ, ತಕ್ಕ ಏರ್ಪಾಟು ಮಾಡಲು ಸೂಚಿಸಿದರು.

ಶ್ರೀ ಸುಧೀಂದ್ರರು ರಘುನಾಥ ಭೂಪಾಲನ ನೇತೃತ್ವದಲ್ಲಿ, ವೆಂಕಟ ಭಟ್ಟರಿಗೆ ಶ್ರೀ ಶಾಲಿವಾಹನ ಶಕ ೧೫೪೩ ರುಧಿರೋದ್ಗಾರಿ ಫಾಲ್ಗುಣ ಬಹುಳ ಬಿದಿಗೆಯಂ ದಿವಸ ವಿಧ್ಯುಕ್ತ ರೀತಿ ತುರ್ಯಾಶ್ರಮವನ್ನಿತ್ತು 'ರಾಘವೇಂದ್ರ'ನೆಂಬ ಅಭಿದಾನದಿಂದ ಕರೆದರು. ಮಹಾಭಾಷ್ಯ ಪರಿಮಳ ವೆಂಕಟ ಭಟ್ಟಾಚಾರ್ಯರೀಗ ರಾಘವೇಂದ್ರ ತೀರ್ಥರಾದರು. ರಾಘವೇಂದ್ರ ಎಂದರೆ ಅರ್ಥ—

ರಾ ಎನಲು ನಾಶವಾಗ್ಪುದು ರಾಶಿ ದೋಷ !
ಘ ಎನೆ ಸದ್ಭಕ್ತಿ ಸುಜ್ಞಾನ ಕರುಣಿಪರಲ !
ವೇಂ ಎನಲು ಜನ್ಮ ಮೃತಿಗಳಂ ಬಿಡಿಸಿ ಪೊರೆವೆ !
ದ್ರ ಎನೆ ದ್ರವಿಣಾರ್ಥ ಶ್ರುತಿಪಾದ್ಯನ ದರುಶಿಪರು !
ಸಾರ್ಥಕವು ರಾಯ ! ರಾಘವೇಂದ್ರಾಖ್ಯ ನಿಮಗೆ !

ತಪೋಧನರಾನ ಶ್ರೀ ಸುಧೀಂದ್ರರು ಪರಿಮಳಾಚಾರ್ಯರಿಗೆಯಿತ್ತ ರಾಘವೇಂದ್ರಾಭಿದವು ಅನ್ವರ್ಥ ಸಂಜ್ಞೆಯಾಯಿತು !

ವೆಂಕಟಭಟ್ಟರು ತುರ್ಯಾಶ್ರಮವನ್ನು ಸ್ವೀಕರಿಸಿದ ಸಂದರ್ಭದಲ್ಲಿ ಕವಿಚಂದ್ರರು ಯತಿಚಂದ್ರರಿಬ್ಬರನ್ನುಕೊಂಡಾಡಿ ಶ್ಲೋಕಗಳನ್ನುಪದ್ಯಗಳನ್ನುರಚಿಸಿ ಪಠಿಸಿದರು. ವಿದ್ವಾಂಸರು ಗಂಭೀರೋಪನ್ಯಾಸಗಳನ್ನಿತ್ತರು. ಆಗ ರಘುನಾಥ ಭೂಪಾಲನು ಸಮಯೋಚಿತವಾಗಿ ಮಾತನಾಡಿ ಕವಿ ಪಂಡಿತರನ್ನು ಚಿತರೀತಿ ಸತ್ಕರಿಸಿ ಧನ ಕನಕ ವಸ್ತುಗಳನ್ನಿತ್ತು ಸಂತಸಗೊಳಿಸಿದನು. ಉಭಯ ಯತಿಗಳನ್ನಾನಂದಪಡಿಸಿ, ಅವರ ಕೃಪೆಗೆ ಪಾತ್ರನಾದನು. ಎಲ್ಲರ ಪ್ರೀತಿಯನ್ನುಗಳಿಸಿದನು.

## ಸರಸ್ವತೀ ಪಿಶಾಚ ಜನ್ಮನಿವೃತ್ತಿ

ವೆಂಕಟ ಭಟ್ಟರು ಸನ್ಯಾಸವನ್ನು ಸ್ವೀಕರಿಸಿದ ವಾರ್ತೆ ಎಲ್ಲೆಡೆ ಹಬ್ಬಿತು. ಸರಸ್ವತೀ ದೇವಿಗೂ ತಿಳಿದು ಬಂದಿತು. ಮೊದಲು ನಂಬಲಾಗಲಿಲ್ಲ. ಜಗದ್ವಿಖ್ಯಾತನಾದ ಪಂಡಿತನ ಸತಿ. ಲೋಕಪೂಜ್ಯನಾದ ಪತಿದೇವನನ್ನು ಸೇವಿಪ ಭಾಗ್ಯ ತನಗಿಲ್ಲದಾಯಿತು. ಆ ಮಹಾನುಭಾವನ ದರ್ಶನ ಭಾಗ್ಯವೇ ತನಗಿನ್ನಿಲ್ಲವಾಯಿತೆಂದು ವಿಧವಿಧವಾಗಿ ಚಿಂತಿಸಿ, ವಿರಹಾಗ್ನಿಯಲ್ಲಿ

ಬಿದ್ದು ಬೆಂಡಾದಳು. ಬಂಧುಗಳು ಸಂತೈಸಿದರು. ಪ್ರಯೋಜನವಾಗಲಿಲ್ಲ. ಚಿರಂಜೀವಿಯಾದ ಲಕ್ಷ್ಮೀನಾರಾಯಣನ ಭವಿಷ್ಯವನ್ನು ಯೋಚಿಸದೇ ಬಾವಿಯಲ್ಲಿ ಬಿದ್ದು ಪ್ರಾಣ ತ್ಯಾಗ ಮಾಡಿದಳು

ಆತ್ಮಹತ್ಯೆ ಮಹಾಪಾಪ. ಹಾಗೆ ಗತಿಸಿದವರಿಗೆ ಸದ್ಗತಿ ಇಲ್ಲ. ತತ್ಫಲಿತವಾಗಿ ಸರಸ್ವತಿಗೆ ಪಿಶಾಚ ಜನ್ಮವು ಪ್ರಾಪ್ತವಾಯಿತು. ಆ ದುರವಸ್ಥೆಯನ್ನು ಸಹಿಸಲಾಗದೆ, ಪತಿದೇವನಾದ ಯತಿಪತಿಯ ಮುಂದೆ ಬಂದು ಕುಳಿತಳು. ಬಿಕ್ಕಿ ಬಿಕ್ಕಿ ಅತ್ತಳು. ಆಗ ಶ್ರೀ ರಾಘವೇಂದ್ರರು ಆ ಸತಿ ತಮಗೆ ಪೂರ್ವಾಶ್ರಮದಲ್ಲಿ ಮಾಡಿದ ಸೇವೆಯನ್ನು ನೆನೆದು, ಸತಿಯ ದುರವಸ್ಥೆಯನ್ನು ನೋಡಲಾಗದೆ; ಕಮಂಡಲೋದಕವನ್ನು ಅಭಿಮಂತ್ರಿಸಿ, ಆ ಪಿಶಾಚಿಯ ಮೇಲೆ ಎರಚಿದರು. ಪತಿಯ ತಪಃಪ್ರಭಾವದಿಂದ ಸತಿಗೆ ಪಿಶಾಚಿ ಜನ್ಮ ತೊಲಗಿತು. ಸದ್ಗತಿಯುಂಟಾಯಿತು. ಆಗ ಎಲ್ಲರೂ ನೋಡುತ್ತಿರಲಾಗಿ ಸರಸ್ವತಿಯು, ವಿಮಾನಾರೂಢಳಾಗಿ ಸ್ವರ್ಗಲೋಕಕ್ಕೆ ಪ್ರಯಾಣ ಮಾಡಿದಳು. ಅಂದಿನಿಂದ ಗೌತಮ ಗೋತ್ರಜರು ವಿವಾಹಾದಿ ಶುಭ ಕಾರ್ಯಗಳಲ್ಲಿ, ಶ್ರೀ ಸರಸ್ವತೀ ಪೂಜೆಯನ್ನು ಮಾಡುವ ಆಚಾರವಿದೆ. ಆ ಪದ್ಧತಿ ಈಗಲೂ ರೂಢಿಯಲ್ಲಿದೆ.

## ತೀರ್ಪು

ಶ್ರೀ ಸುಧೀಂದ್ರರು ಬೃಂದಾವನಸ್ಥರಾದ ವಿಷಯ ತಿಳಿದು, ಸಂಚಾರದಲ್ಲಿದ್ದ ಯಾದವೇಂದ್ರರು ಕುಂಭಕೋಣೆಗೆ ತಿರುಗಿ ಬಂದರು. ಪೀಠಸ್ಥರಾದ ರಾಘವೇಂದ್ರರನ್ನು ಕಂಡು, ತಾನಾಶ್ರಮ ಜ್ಯೇಷ್ಠನೆಂದು, ಮಠದಲ್ಲಿರುವ ಶ್ರೀ ಮೂಲರಾಮಚಂದ್ರಾದಿ ಮುಖ್ಯ ವಿಗ್ರಹಗಳು, ಇತರ ವಸ್ತುಗಳು, ತನಗೆ ಸೇರಬೇಕಾದುದು ನ್ಯಾಯವೆಂದು, ಮಠದ ಆಧಿಪತ್ಯವನ್ನು ತನಗೆ ಒಪ್ಪಿಸಬೇಕೆಂದು ನುಡಿದರು. ಇದಕ್ಕೆ ಶ್ರೀ ರಾಘವೇಂದ್ರರು ತಮ್ಮ ಸಮ್ಮತಿಯನ್ನು ಸೂಚಿಸಿದರು. ಆದರೆ ಶಿಷ್ಯರು ಒಪ್ಪಬೇಕಲ್ಲ ? ಅದು ಸಾಧ್ಯವಾಗದೆಂದು ಅಡ್ಡಿ ಮಾಡಿದರು. ಆಗ ಯಾದವೇಂದ್ರರು ದಾರಿ ತೋರದೆ,

ರಾಘವೇಂದ್ರರನ್ನು ಕರೆದುಕೊಂಡು ತಂಜಾಪುರಾಧೀಶನಾದ ರಘುನಾಥ ಭೂಪಾಲನ ಸಭೆಗೆ ಬಂದರು. ರಾಜನಿಗೆ ವಿಷಯುವನ್ನು ತಿಳಿಸಿ ಆತನ ತೀರ್ಪಿನಂತೆ ನಡೆ ಯುವದಾಗಿ ತಿಳಿಸಿದರು.

ವಿದ್ವತ್ಕವಿಯಾದ ರಘುನಾಥರಾಯನಿಗೆ ಯತಿಗಳಿಬ್ಬರ ವಿವಾದವು ಸಮಸ್ಯೆಯಾಗಿ ತೋರಿತು. ತದೇಕ ಧ್ಯಾನದಲ್ಲಿ ಮುಗ್ನನಾದ ರಾಜನಿಗೆ ಆ ರಾತ್ರಿ ಸ್ವಪ್ನವಾಯಿತು. ಸ್ವಪ್ನದಲ್ಲಿ ಈ ಸಮಸ್ಯೆಗೆ ಪರಿಹಾರವು ನಿರ್ಧರಿಸ ಲಾಯಿತು.

ಮರುದಿನ ಸಭೆ ಸಮಾವೇಶವಾಯಿತು. ಕವಿಗಳು, ಪಂಡಿತರು, ಅಧಿ ಕಾರಿಗಳು, ಪ್ರಜರು, ತೀರ್ಪು ತೀರನ್ನು ಕೇಳಲು ಉತ್ಸುಕರಾಗಿದ್ದರು. ಯತಿಗಳಿಬ್ಬರು ಉಚಿತಾಸನದಲ್ಲಿ ಆಸೀನರಾದರು. ರಾಜನು ಅವರೀರ್ವರಿಗೆ ನಮಸ್ಕರಿಸಿ, ಸಭೆಯನ್ನುದ್ದೇಶಿಸಿ, ನ್ಯಾಯಾಧೀಶನ ರೀವಿಯಲ್ಲಿ ಹೀಗೆ ತೀರ್ಪಿತ್ತನು.

"ಯತೀಂದ್ರರೇ ತಾವಿಬ್ಬರು ನನಗೆ ಸದಾ ಮಾನ್ಯರು, ಶಾಪಾನುಗ್ರಹ ಶಕ್ತರಿರುವಿರಿ. ತೀರ್ಪು ವಿಷಯವಾಗಿ ಅಶಾಂತಿಯನ್ನು ಪೊಂದದೆ, ನನ್ನನ್ನು ನನ್ನ ಪ್ರಜೆಯನ್ನು ರಕ್ಷಿಸಬೇಕು !

ಶ್ರೀ ಸುಧೀಂದರು, ಶ್ರೀ ರಾಮುಚಂದ್ರನ ಆಜ್ಞೆ ಮೇರೆಗೆ ವೆಂಕಟ ಭಟ್ಟರಿಗೆ ಆಶ್ರಮುವನ್ನಿತ್ತರು. ಯಾದವೇಂದ್ರನೆಂದರೆ ಯದುಪತಿಯಾದ ಕೃಷ್ಣ. ರಾಘವೇಂದ್ರನೆಂದರೆ ರಘುಕುಲಾಧಿಪತಿಯಾದ **ರಾಮುಚಂದ್ರ.** ಕೃಷ್ಣ ನಿಗೆ ರಾಜ್ಯವಿಲ್ಲ – ರಾಜ್ಯಪಾಲನೆ ಮಾಡಲಿಲ್ಲ. ರಾಮನೇ ರಾಜ್ಯವಾಳಿದನು – ಅಧಿಪತ್ಯವು ರಾಮನದೇ. ಆದ್ದರಿಂದ ಮಠಾಧಿಪತ್ಯವು, ಸಮುಸ್ತ ವಸ್ತು ಸಮು ದಾಯುವು ರಾಘವೇಂದ್ರರಿಗೆ ಸೇರುವುದು ನ್ಯಾಯುವಾದುದು."

ಹೀಗೆ ತೀರ್ಪು ತನಗೆ ವಿರುದ್ಧವಾದುದಕ್ಕೆ ಬೇಸರಗೊಂಡು, ಯಾದವೇಂದ್ರರು, ಶ್ರೀ ಮೂಲರಾಮರ ಪೂಜಿಸಲಾಗಲಿಲ್ಲವೆಂದು ಚಿಂತಿಸಿ, ಮನಶ್ಶಾಂತಿಗಾಗಿ, ತಪಸ್ಸು ಮಾಡಲು ಅರಣ್ಯಕ್ಕೆ ಹೊರಟುಹೋದರು.

## ಮಹಿಮೆಗಳು

### ಗುರುಕೃಪೆ

ಶ್ರೀ ರಾಘವೇಂದ್ರರು ಸಂಚಾರದಲ್ಲಿದ್ದರು. ಕರ್ನೂಲು ಜಿಲ್ಲಾ (ಮೊದಲು ಬಳ್ಳಾರಿ ಜಿಲ್ಲಾ) ಆದವಾನಿಗೆ ಸಮೀಪದಲ್ಲಿರುವ ಕಂದನಾತಿಗೆ ಬಂದರು. ಅಲ್ಲಿ ಶ್ರೀಮಂತರ ಆಹ್ವಾನಗಳನ್ನು ಬಿಟ್ಟು ಬಡವನಾದ ವೆಂಕಣ್ಣನ ಕುಟೀರಕ್ಕೆ ಬಂದರು. ವೆಂಕಣ್ಣನು, ಬಡವ, ಅವಿದ್ಯಾವಂತ. ಶ್ರೀ ಮೂಲರಾಮರ ಪೂಜೆ, ಆ ಕುಟೀರದಲ್ಲೆ ನಡೆಯಿತು. ಶ್ರೀಮಂತರ ಉದಾರ ಸಹಾಯ ಸಹಕಾರಗಳಿಂದ ಶ್ರೀಗಳವರಿಗೆ ಭಿಕ್ಷೆ ಕುಟೀರದಲ್ಲಿಯೇ ವೈಭವದಿಂದ ನಡೆಯಿತು. ಭಕ್ತರು ತೀರ್ಥ ಪ್ರಸಾದಗಳನ್ನು ಸ್ವೀಕರಿಸಿದರು ಭೋಜನಾನಂತರದಲ್ಲಿ ಶ್ರೀಗಳವರು ವೆಂಕಣ್ಣನನ್ನು ಕರೆಸಿ,

"ವೆಂಕಣ್ಣಾ ! ನಿನ್ನಿಂದ, ಶ್ರೀಮಠಕ್ಕೆ ಮುಂದೆ ದೊಡ್ಡ ಸಹಾಯವಾಗಬೇಕಾಗಿದೆ. ಆಪತ್ಸಮಯದಲ್ಲಿ ನಮ್ಮನ್ನು ಸ್ಮರಿಸು, ತೊಂದರೆಗಳು ತೊಲಗುವವು. ನಿನಗೆ ಮಂಗಳವಾಗಲಿ"

ಎಂಬುದಾಗಿ ಅಪ್ಪಣೆ ಕೊಟ್ಟು, ಫಲ ಮಂತ್ರಾಕ್ಷತೆಗಳನ್ನಿತ್ತು ಆಶೀರ್ವದಿಸಿದರು.

ರಾಯಚೂರ್ ಪ್ರಾಂತವನ್ನು "ಅಬ್ದುಲ್ಲಾಖಾನ್" ಪಾಲಿಸುತ್ತಿದ್ದನು. ಆತನಿಗೆ 'ವಿದ್ಯೆಯಿಲ್ಲ' ಒಂದು ದಿನ ಆತನು, ಬೇಟೆಯಾಡಲು ಅಡವಿಗೆ ಹೋಗಿ, ದಣಿದು, ವಿಶ್ರಾಂತಿ ಪಡೆಯುತ್ತಿದ್ದನು. ಆಗ ಒಬ್ಬ ಭಟನು ಬಂದು, ಕುದುರೆ

ಮೇಲಿಂದ ಇಳಿದು, ನವಾಬನಿಗೆ 'ಸಲಾಂ' ಮಾಡಿ ಒಂದು ಚೀಟಿಯನ್ನಿತ್ತು ನಿಂತನು. ಓದು ಬಾರದ ನವಾಬನು ಸುತ್ತಲು ನೋಡಿದನು. ಅಲ್ಲಿ ಸೌದೆ ಯನ್ನು ಆರಿಸುತ್ತಿದ್ದ ಬಡ ವೆಂಕಣ್ಣನನ್ನು ಕರೆಸಿ, ಪತ್ರವನ್ನಿತ್ತು ಓದಿ ಹೇಳ ಬೇಕೆಂದಪ್ಪಣೆ ಮಾಡಿದನು

ವೆಂಕಣ್ಣನಿಗೆ ವಿದ್ಯೆ ಬಾರದು. ನವಾಬನ ಕಟ್ಟಪ್ಪಣೆ ಮೀರಲಾಗದು. ಸಂಕಟಕ್ಕೆ ಸಿಲುಕಿದನು. ಶ್ರೀ ರಾಘವೇಂದ್ರರನ್ನು ಸ್ಮರಿಸಿಕೊಂಡನು. ನವಾಬರೇ ತಮಗೆ ಯುದ್ಧದಲ್ಲಿ ಜಯವಾಗಿದೆ ಎಂಬ ಸುದ್ದಿಯು ಈ ಲಕೋಟೆ ಯಲ್ಲಿದೆ ಎಂದು ತಿಳಿಸಿದನು. ಸಂತಸಗೊಂಡ ನವಾಬನು ವೆಂಕಣ್ಣನನ್ನು ತನ್ನ ಜೊತೆ ಕರೆದೊಯ್ದನು. ಒಂದು ಚಿಕ್ಕ ಉದ್ಯೋಗವನ್ನು ಕೊಟ್ಟನು. ವೆಂಕಣ್ಣನು ಅಂದಿನಿಂದ ಮೂರು ವರ್ಷಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿ, ಕ್ರಮೇಣ ಆದವಾನಿಗೆ ದಿವಾನನಾಗಿ ನಿಯಮಿಸಲ್ಪಟ್ಟನು.

**ದನ ಕಾಯುವ ವೆಂಕಣ್ಣನು ಮಂತ್ರಿಯಾದನು !**

## ಮೃತ್ತಿಕಾ ಮಹಿಮೆ

ಗುರುರಾಜರು ಪಂಢರೀಪುರ ಪ್ರಾಂತದಲ್ಲಿ ಸಂಚಾರ ಮಾಡುತ್ತಿರು ವಾಗ, ಒಂದು ದಿನ ಪ್ರಾತಃಕಾಲದಲ್ಲಿ ಓರ್ವ ಶಿಷ್ಯನು ಶ್ರೀಗಳಲ್ಲಿಗೆ ಬಂದು ತನಗೆ, ಸಂಬಳ ಮತ್ತು ರಜೆ ಕೊಡಬೇಕೆಂದು ಬೇಡಿಕೊಂಡನು. ಅದು ಮೃತ್ತಿಕಾಶೌಚದ ಸಮಯ. ಆಗ ಶ್ರೀಗಳವರು, "ಇದು ಮೃಚ್ಛೌಚದ ವೇಳೆ, ನನ್ನಲ್ಲಿ ಹಣವಿಲ್ಲ ಮಣ್ಣೇ ಹಣ ! ಬೇಕಾದರೆ ಮಣ್ಣನ್ನೆ ತೆಗೆದುಕೊಂಡು ಹೋಗು" ಎಂದು ನುಡಿದರು. ವಿಶ್ವಾಸ ವುಳ್ಳವನಾದ್ದರಿಂದ ಆ ಶಿಷ್ಯನು ಗುರುಗಳಿಂದ ಮೂರು ಹಿಡಿ

ಮಣ್ಣನ್ನೇ ತೆಗೆದುಕೊಂಡನು. ಶ್ರೀಗಳವರಿಗೆ ನಮಸ್ಕರಿಸಿ ಸ್ವಗ್ರಾಮಕ್ಕೆ ಪ್ರಯಾಣ ಬೆಳಸಿದನು. ಸಂಜೆಯಾಯಿತು. ದಾರಿಯಲ್ಲಿದ್ದ ಒಂದು ಹಳ್ಳಿಯಲ್ಲಿ ಆ ರಾತ್ರಿ ಓರ್ವ ಶ್ರೀಮಂತನ ಮನೆಯ ಜಗುಲಿಯ ಮೇಲೆ ವಿಶ್ರಮಿಸಿದನು.

ಆ ಮನೆಯ ಯಜಮಾನನ ಹೆಂಡತಿ ಪೂರ್ಣ ಗರ್ಭಿಣಿ. ಆ ರಾತ್ರಿ ಹೆರಿಗೆಯಾಗುವ ಸಂಭವವಿತ್ತು. ಆ ಮನೆಯ ಮಕ್ಕಳನ್ನೆಲ್ಲ ಪಿಶಾಚಿಯೊಂದು ಬಂದು ಹುಟ್ಟಿದ ಕೂಡಲೆ ಭಕ್ಷಿಸುತ್ತಿತ್ತು. ಮಾಮೂಲಿನಂತೆ ಅಂದು ಪಿಶಾಚಿಯು ಬಂದಿತು. ಮನೆಯ ಒಳಗಡೆ ಹೋಗಲಾಗಲಿಲ್ಲ. ಶ್ರೀಗಳವರಿತ್ತ ಮೃತ್ತಿಕೆ ಅದರ ಪಾಲಿಗೆ ಬೆಂಕಿಯಾಯಿತು. ಆಗ ಆ ಬ್ರಹ್ಮರಾಕ್ಷಸಿ, ಮಲಗಿದ ಯುವಕನನ್ನೆಬ್ಬಿಸಿ, ತನಗೆ ದಾರಿಕೊಡಬೇಕೆಂದು ಬೇಡಿತು. ಆ ಯುವಕನ ಕೇಳಿದಂತೆ ಧನ ಕುಂಭವನ್ನು ತಂದುಕೊಟ್ಟು ದಾರಿ ಕೇಳಿತು. ಇದೆಲ್ಲವೂ ಮೃತ್ತಿಕೆಯ ಮಹಿಮೆ ಎಂಬುದನ್ನು ತಿಳಿದ ಆ ಯುವಕನು ಮೃತ್ತಿಕೆಯನ್ನು ತೆಗೆದು ಕೊಂಡು ಆ ಪಿಶಾಚಿಯ ಮೇಲೆ ಎರಚಿದನು. ತಕ್ಷಣ ದಲ್ಲಿ ಆ ಬ್ರಹ್ಮ ರಾಕ್ಷಸಿಗೆ ಪಿಶಾಚಿಯ ಜನ್ಮ ತೊಲಗಿತು. ಅದು ಹಾಹಾಕಾರ ದಿಂದ ಮಾಯವಾಯಿತು!

ಆ ಮನೆಯಲ್ಲಿ ಸುಖ ಪ್ರಸವವಾಯಿತು. ಶಿಶುವು ಬದುಕಿತು. ಮನೆಯ ಯಜಮಾನನು ಹೊರಗೆ ನಡೆದುದ್ದೆಲ್ಲವನ್ನು ನೋಡಿ ಚಕಿತನಾದನು. ಆ ಯುವಕನನ್ನು ಕರೆದು ಎಲ್ಲವನ್ನು ವಿಚಾರಿಸಿ, ತಮ್ಮ ಬಳಗದಲ್ಲಿದ್ದ ಕನ್ಯೆ ಯೊಂದನ್ನು ತಂದು ಆತನಿಗೆ ಕೊಟ್ಟು ವಿವಾಹ ಮಾಡಿದನು. ಇದು ಮೃತ್ತಿಕಾ ಮಹಿಮೆಯಲ್ಲವೆ ? ಶ್ರೀ ಗುರುರಾಜರ ಮೃತ್ತಿಕೆಯ ಪ್ರಭಾವದಿಂದ

1. ಬಡ ಶಿಷ್ಯನಿಗೆ ಲಗ್ನವಾಯಿತು.
2. ವಿಶೇಷವಾಗಿ ಧನ ಪ್ರಾಪ್ತವಾಯಿತು.
3. ಶ್ರೀಮಂತನ ಮಗನೂ ಬದುಕಿದನು
4. ಬ್ರಹ್ಮರಾಕ್ಷಸಿಗೆ ಪಿಶಾಚ ಜನ್ಮವು ನಿವೃತ್ತಿಯಾಯಿತು.

# ಪ್ರಾ ಣ ದಾ ನ

ಗುರುರಾಜರು ಸಂಚಾರದಲ್ಲಿ 'ಗದಗ' ಸಮೀಪದಲ್ಲಿರುವ '**ಕಿರೀಟಗಿರಿ**' ಯನ್ನು ಸೇರಿದರು. ಅಂದು ದೇಶಾಯಿ ರಘುನಾಥರಾಯನ ಮನೆಯಲ್ಲಿ ಭಿಕ್ಷೆ. ಅದು ವಸಂತ ಋತುವು. ರಾಯರು ಮನೆಯಲ್ಲಿ ಮಾವಿನ ಹಣ್ಣಿನ ರಸಾಯನ ವನ್ನು ಮಾಡಿಸಿ ದೊಡ್ಡ ದೊಡ್ಡ ಪಾತ್ರೆಗಳಿಗೆ ತುಂಬಿದರು. ವಿವಿಧ ಭಕ್ಷ್ಯ ಗಳನ್ನು ಮಾಡಿದರು.

ಶ್ರೀಗಳವರು ಮೂಲರಾಮನ ಪೂಜೆಯನ್ನು ಮಾಡಿದರು. ಬ್ರಾಹ್ಮಣರು ತೀರ್ಥವನ್ನು ತೆಗೆದುಕೊಂಡು ಪ್ರಸಾದಕ್ಕೆ ಸಿದ್ಧವಾದರು. ದೇಶಾಯಿಯ ಚಿಕ್ಕ ಮಗನು ಆಟವಾಡುತ್ತಾ ಹೋಗಿ ಶೀಕರಣೆಯ ಪಾತ್ರೆಯಲ್ಲಿ ಬಿದ್ದು ಮೃತ ನಾದನು. ಬ್ರಾಹ್ಮಣ ಸಂತರ್ಪಣೆ ನಡೆಯಿತು. ಭಕ್ಷ್ಯಗಳನ್ನು ತಿಂದರು, ಫಲರಸವನ್ನು ಕುಡಿದರು. ಬ್ರಾಹ್ಮಣರು ಭೋಜನ ಪ್ರಿಯರಲ್ಲವೆ ? ಫಲರಸ ವನ್ನು ತೆಗೆಯುವಾಗ ಬಾಲಕನ ಶವವು ತಾಕಿತು. ತೆಗೆದು ನೋಡಿ ಚಿಂತೆ ಗೀಡಾದರು. ದೇಶಾಯಿ ದಂಪತಿಗಳಿಗೆ ವಿಷಯವು ತಿಳಿದು ಶೋಕ ಸಾಗರದಲ್ಲಿ ಮುಳುಗಿದರು. ವಿಷಯವು ಶ್ರೀಗಳವರ ಕಿವಿಗೆ ಬಿದ್ದಿತು.

ಶ್ರೀಗಳವರು ದೇಶಾಯಿ ದಂಪತಿಗಳನ್ನು ಕರೆಸಿ, ಮೃತ ಶಿಶುವನ್ನು ತರಿಸಿ ದರು. ಕಮಂಡಲೋದಕವನ್ನು ಅಭಿಮಂತ್ರಿಸಿ ಆ ಕಳೇಬರದ ಮೇಲೆ ಪ್ರೋಕ್ಷಿಸಿ ದರು. ಆ ಹುಡುಗನು, ನಿದ್ದೆಯಿಂದ ಎದ್ದಂತೆ ಎದ್ದು ಕುಳಿತನು. ಮಾತಾ ಪಿತೃಗಳ ಆನಂದಕ್ಕೆ ಪಾರವಿಲ್ಲದಂತಾಯಿತು. ನೆರೆದ ಜನರು ಈ ದೃಶ್ಯವನ್ನು ಕಂಡು, ಗುರು ಮಹಾತ್ಮೆಯನ್ನು ಕೊಂಡಾಡಿದರು. ದೇಶಾಯಿಯು ಶ್ರೀಗಳಿಗೆ ವಿಶೇಷವಾಗಿ ಧನವನ್ನು ಕೊಟ್ಟು ಕೃತಜ್ಞತೆಯನ್ನು ವ್ಯಕ್ತಪಡಿಸಿದನು.

# ವಿಷಮ ಪರೀಕ್ಷೆ

ಗುರುರಾಜರು ಸತ್ತವನನ್ನು ಬದುಕಿಸಿದರೆಂಬ ಸುದ್ದಿಯು ಎಲ್ಲೆಡೆ ಹಬ್ಬಿತು. ಕೆಲವರು ಗುರುಗಳ ಮಹಿಮೆ ಎಂದರು. ಕೆಲವರು ಮಾತಾ ಪಿತೃಗಳ ಸುಕೃತ ವಿಶೇಷವೆಂದರು. ಆದರೆ ದುಷ್ಟರು ನಂಬಲಿಲ್ಲ. ಗಾರಡೀ ವಿದ್ಯೆ ಎಂದರು. ಗುರುಶಕ್ತಿಯನ್ನು ಪರೀಕ್ಷಿಸಲು ಉದ್ಯುಕ್ತರಾದರು.

ವೀರಶೈವ ಬಾಲಕರು, ಶ್ರೀಗಳವರನ್ನು ಪರೀಕ್ಷಿಸಲು ನಿಶ್ಚಯಿಸಿದರು. ಹಿರಿಯರು ಬುದ್ಧಿ ಮಾತನ್ನು ಹೇಳಿದರು. ಪಾಪಿಗಳು ಕೇಳುವರೇ ? ಆ ಲಿಂಗಾಯಿತರು ತಮ್ಮಲ್ಲಿ 'ಸೆಟ್ಯ' ಎಂಬ ಬಾಲಕನನ್ನು ಶವಾಕೃತಿಯಲ್ಲಿ ಮಲಗಿಸಿ ಹೊತ್ತುಕೊಂಡು ರೋದನ ಮಾಡುತ್ತಾ ಗುರುಗಳಲ್ಲಿಗೆ ಬಂದು,

"ಗುರುದೇವಾ ! ಮೊನ್ನೆ ತಾವು ದೇಶಾಯಿಯ ಮಗನನ್ನು ಬದುಕಿಸಿದ ಸುದ್ದಿ ಕೇಳಿದೆವು. ನಮ್ಮವನೊಬ್ಬನು ಸತ್ತಿರುವನು. ಅವನನ್ನು ಕೃಪೆ ಮಾಡಿ ಬದುಕಿಸಿಕೊಡಬೇಕು !" ಎಂಬುದಾಗಿ ನುಡಿದರು. ಸರ್ವಜ್ಞರಾದ ಗುರು ರಾಘವೇಂದ್ರರು, ಕಾಪಟ್ಯವನ್ನು ತಿಳಿದು" ಮೊನ್ನೆ ನಾವು ಕೊನೆ ಪ್ರಾಣದಿಂದ ಇದ್ದವನನ್ನು ಬದುಕಿಸಿದೆವು. ಆದರೆ ನಿಮ್ಮವನು ಪೂರ್ಣ ನಿರ್ಜೀವಿಯಾಗಿದ್ದಾನೆ. ಇವನನ್ನು ಬದುಕಿಸಲು ಯಾರಿಗೂ ಸಾಧ್ಯವಿಲ್ಲ. ಮುಂದಿನ ಕಾರ್ಯ ನಡೆಯಲಿ !" ಎಂದಪ್ಪಣೆಯಿತ್ತರು. ಆಗ ದುಷ್ಟ ಬಾಲ ಕರು, ನಗುತ್ತಾ "ಏಳಲೇ ಸೆಟ್ಯಾ ! ಸ್ವಾಮಿಗಳ ಶಕ್ತಿ ಬಯಲಾಯಿತು ! ಸೆಟ್ಯಾ ಏಳು ! ಎಂದೆಬ್ಬಿಸಿದರು. ಸೆಟ್ಯನು ಏಳಲಿಲ್ಲ. ನೋಡಲಾಗಿ ಸೆಟ್ಯನು ಶವವಾಗಿದ್ದನು. ದುಷ್ಟರು ಗಾಬರಿಯಿಂದ ಓಡಿಹೋದರು. ಒಬ್ಬ ಬಾಲಕನ ಪ್ರಾಣವನ್ನೇ ತೆಗೆದರು.

ನಿಗ್ರಹಾನುಗ್ರಹಶಕ್ತರಾದ ಮಹಾತ್ಮರ ಅನುಗ್ರಹ ಸಂಪಾದನೆ ಮಾಡಬೇಕು ! ಆಗ್ರಹಕ್ಕೆ ಗುರಿಯಾಗುವ ಕೆಲಸ ಮಾಡಬಾರದು !

# ಹೊಲೆಯ ಮುಕ್ತಿ ಹೊಂದಿದ

ಶ್ರೀಗಳವರು ತಮ್ಮ ಜನ್ಮ ಕಾರಣನಾದ ಶ್ರೀನಿವಾಸನ ದರ್ಶನಕ್ಕಾಗಿ ತಿರುಪತಿಗೆ ಪ್ರಯಾಣ ಬೆಳಸಿದರು. ದಾರಿಯಲ್ಲಿ ಒಂದು ಹಳ್ಳಿಯಲ್ಲಿ ಬಿಡಾರ ಮಾಡಿದರು. ಆ ರಾತ್ರಿ ಪ್ರಾಣದೇವರ ಗುಡಿಯಲ್ಲಿ ವಾಸಮಾಡಿ ಮರುದಿನ ಮುಂದಕ್ಕೆ ಪ್ರಯಾಣ ಮಾಡುವುದಾಗಿ ತಿಳಿಸಿದರು.

ಹೊಲೆಯನೊಬ್ಬನು ಸೌದೆಯನ್ನು ಹೊತ್ತುಕೊಂಡು ಬಂದನು. ಶ್ರೀಗಳವರನ್ನು ಕಂಡು ದೂರದಿಂದ ನಮಸ್ಕರಿಸಿ ನಿಂತನು. ಆಗ ಶ್ರೀಗಳು ಅವನನ್ನು ನೋಡಿ.

ಶ್ರೀಗಳು – ನೀನಿನ್ನು ಜೀವಿಸಿದ್ದೀಯಾ ?

ಹೊಲೆಯ – ಅಹುದು ತಂದೆ. ಜೀವನ ಬೇಸರವಾಗಿದೆ. ನನಗೆ ಸಾವು ಬರಲಿ, ಮತ್ತೆ ಮತ್ತೆ ಹುಟ್ಟಲಾರೆ.

ಶ್ರೀಗಳು – ಆಗಲಿ – ದೇವರಿಗೆ ಏನನ್ನಾದರೂ ತಂದು ಕೊಡು. ಶ್ರೀ ಮೂಲರಾಮರ ದರ್ಶನ ಮಾಡಿಕೊ ! ಸದ್ಗತಿಯಾಗುವುದು.

ಹೊಲೆಯ – ಆಗಲಿ. ಮನೆಗೆ ಹೋಗಿ ತರುತ್ತೇನೆ.

ಎಂಬುದಾಗಿ ಹೇಳಿ ಮನೆಗೆ ಹೋಗಿ ಸ್ವಲ್ಪ ಸಾಸಿವೆಕಾಳನ್ನು ತಂದು ಕೊಟ್ಟನು. ಶ್ರೀಗಳವರದನ್ನು ಅಡುಗೆಯಲ್ಲಿ ಬಳಸಬೇಕೆಂದರು. ಅದು ವ್ರತ ಕಾಲ. ಆ ತಿಂಗಳಲ್ಲಿ ಸಾಸಿವೆ ನಿಷಿದ್ಧ. ಪರಿಹಾರವನ್ನು ಕಾಣದೆ ಪಂಡಿತರು ಶ್ರೀಗಳಿಗೆ ವಿಜ್ಞಾಪಿಸಿದರು. ಆಗ ಶ್ರೀಗಳವರು.

'ಈ ಹೊಲೆಯ ಪೂರ್ವ ಜನ್ಮದಲ್ಲಿ ಕನಕದಾಸ. ನಾನಾಗ ವ್ಯಾಸ ರಾಯರು. ಆಗ ನಮಗೆ ಶ್ರೀ ಹರಿಯ ದರ್ಶನವನ್ನು ಮಾಡಿಸಿದ ಭಾಗ್ಯಶಾಲಿ. ಈತನ ಜ್ಞಾಪಕಾರ್ಥವಾಗಿ ನಮ್ಮ ಮಠದಲ್ಲಿ ಇಂದಿನಿಂದ ವ್ರತಕಾಲದಲ್ಲಿ ಸಾಸಿವೆಯನ್ನು ಬಳಸಬೇಕು" ಎಂದಪ್ಪಣೆಯಿತ್ತರು.

ಅನಂತರ ಸಾರಿಗೆ ಸಾಸಿವೆಯ ವಗ್ಗಗಣೆ ಕೊಟ್ಟರು. ಅದು ಶ್ರೀ ಮೂಲರಾಮರಿಗೆ ನಿವೇದಿತವಾಯಿತು. ಆ ಹೊಲೆಯ ಮೂಲರಾಮರ ದರ್ಶನ ಪಡೆದನು, ತೀರ್ಥ ಪ್ರಸಾದಗಳನ್ನು ಸ್ವೀಕರಿಸಿದನು. ಶ್ರೀಹರಿಭಜನೆಯನ್ನು ಮಾಡುತ್ತಾ ಆಂಜನೇಯ ದೇವಸ್ಥಾನದ ಮುಂಭಾಗದಲ್ಲಿ ಪ್ರಾಣ ತ್ಯಾಗ ಮಾಡಿದನು. ಶ್ರೀಗಳವರವನ ಕಳೇಬರವನ್ನು ಅಲ್ಲೇ ಸಮಾಧಿ ಮಾಡಿಸಿ ಅದಕ್ಕೆ **ಕನಕದಾಸರು ಮುಕ್ತಿ ಪಡೆದ ಸ್ಥಳವೆಂದು** ಹೆಸರಿಟ್ಟರು.

## ಸಾಸಿವೆಯ ಪ್ರಾಧಾನ್ಯತೆ

ನೆಜಾಂನಲ್ಲಿ '**ಬಿದರುಹಳ್ಳಿ**' ಎಂಬ ಹಳ್ಳಿಯಿದೆ ಅಲ್ಲಿ **ಶ್ರೀನಿವಾಸಾಚಾರ್ಯ**ನೆಂಬ ಘನ ವಿದ್ವಾಂಸರಿದ್ದರು. ಆತನು ದೇವಾಂಶಸಂಭೂತರಾದ **ಶ್ರೀ ಯಾದವಾರ್ಯ**ರ ಶಿಷ್ಯನು. ದ್ವೈತ ವೇದಾಂತಕ್ಕೆ ಅನೇಕ ಕೃತಿಗಳನ್ನು, ರಚಿಸಿ ಮಹದುಪಕಾರವನ್ನು ಮಾಡಿರುತ್ತಾನೆ. ಸಂಚಾರದಲ್ಲಿ ಶ್ರೀ ರಾಘವೇಂದ್ರರು ತಮ್ಮ ಗ್ರಾಮಕ್ಕೆ ಸಮೀಪದಲ್ಲಿದ್ದಾಗ ಆತನು ಶ್ರೀಗಳವರಲ್ಲಿಗೆ ಹೋಗಿ, ತನ್ನ ಕೃತಿಗಳನ್ನವರ ಮುಂದಿಟ್ಟು, ಸಾಷ್ಟಾಂಗ ಪ್ರಣಾಮ ಮಾಡಿ, ಕೃತಿಗಳನ್ನವಲೋಕಿಸಬೇಕೆಂದನು.

ಶ್ರೀಗಳವರು, ಆಕೃತಿಗಳನ್ನು ಪರಿಶೀಲಿಸಿ, ಸಂತುಷ್ಟರಾಗಿ, ಆಚಾರ್ಯರನ್ನು ಅಭಿನಂದಿಸಿದರು. ಅವರನ್ನು "**ಶ್ರೀನಿವಾಸತೀರ್ಥ**" ಎಂಬುದಾಗಿ ಕರೆದರು. 'ತೀರ್ಥ' ಎಂಬುದು ಸಾಮಾನ್ಯವಾಗಿ ಸನ್ಯಾಸಿಗಳಿಗೆ ಅನ್ವಯಿಸುವುದು. ಆದರೆ ಗಾರ್ಹಸ್ಥ್ಯದಲ್ಲಿದ್ದ ಆಚಾರ್ಯರಿಗೆ ಅನುಗ್ರಹಿಸಿರುತ್ತಾರೆ.

ಅನಂತರ ಶ್ರೀಗಳವರು ದೇವರ ಪೂಜೆಯನ್ನು ಮಾಡಿದರು. ಭಕ್ತರಿಗೆ ತೀರ್ಥವನ್ನಿತ್ತರು. ಭಕ್ತರು ಪ್ರಸಾದಕ್ಕೆ ಸಿದ್ಧವಾದರು. ಶ್ರೀನಿವಾಸಾಚಾರ್ಯರನ್ನು ಶ್ರೀಗಳವರು ಪ್ರಸಾದಕ್ಕೆ ತಮ್ಮ ಬಳಿಯಲ್ಲಿ ಕೂಡಲು ಹೇಳಿದರು. ಅದು ವ್ರತಕಾಲ. ಶ್ರೀನಿವಾಸಾಚಾರ್ಯರು ಶ್ರೀಮದುತ್ತರಾದಿ ಮಠದ ಪಂಡಿತರು. ರಾಯರ ಮಠದಲ್ಲಿ ಈಚೆಗೆ ಕನಕನ ಜ್ಞಾಪಕಾರ್ಥವಾಗಿ ವ್ರತಕಾಲದಲ್ಲಿ ಸಾಸಿವೆಯನ್ನುಪಯೋಗಿಸುವ ಪದ್ಧತಿಯಿರುವುದರಿಂದ ಸಾಸಿವೆಯನ್ನು ಕಂಡು ಆಚಾರ್ಯರು, ವ್ರತ ಭಂಗವಾಗುವುದೆಂದು ಸಾರನ್ನು ನಿರಾಕರಿಸಿದರು. ಶ್ರೀಗಳವರಿದನ್ನು ಕಂಡು ಬೇರೆ ಪದಾರ್ಥಗಳನ್ನು ಬಡಿಸಲು ಅಪ್ಪಣೆ ಮಾಡಿದರು.

ಭೋಜನಾನಂತರದಲ್ಲಿ ಆಚಾರ್ಯರು ಶ್ರೀಗಳವರ ಅಪ್ಪಣೆ ಪಡೆದು, ಫಲ ಮಂತ್ರಾಕ್ಷತೆಯನ್ನು ಸ್ವೀಕರಿಸಿ ಪ್ರಯಾಣ ಬೆಳಸಿದರು ತಿರುಗಿ ಬಂದ ಶಿಷ್ಯನ ಕಾಂತಿಹೀನವಾದ ಮುಖವನ್ನು ಕಂಡು ಯಾದವಾರ್ಯರು ಆಕ್ಷೇಪಿಸಿ ವಿಷಯವನ್ನು ಕೇಳಿ ತಿಳಿದುಕೊಂಡರು. ಆಚಾರ್ಯನಿಗೆ ಕೊಟ್ಟ ಮಂತ್ರಾಕ್ಷತೆ ಕಪ್ಪಾಗಿದ್ದವು. ಆದರೆ ತಮಗೆಂದು ಗುರುರಾಜರು ಕಳುಹಿದ ಮಂತ್ರಾಕ್ಷತೆ ಕೆಂಪಾಗಿರುವುದು ಕಂಡು, ಸಾಸಿವೆಯ ಪ್ರಸಂಗ ಕೇಳಿ ಶಿಷ್ಯನ ಕರ್ತವ್ಯವನ್ನು ಸೂಚಿಸಿದರು.

ಮರುದಿನ ಶ್ರೀನಿವಾಸಾಚಾರ್ಯರು ಶ್ರೀ ರಾಘವೇಂದ್ರರಲ್ಲಿಗೆ ಬಂದು ಕ್ಷಮೆ ಬೇಡಿದರು. ಆಗ ಶ್ರೀಗಳು,

ಅಮ್ಮ ಗುರುಗಳು ಮತ್ತೆ ಇಲ್ಲಿಗೆ
ನಿಮ್ಮ೯ಂ ಕಳುಹಿದರೆ ? ಬನ್ನಿರಿ
ಬೊಮ್ಮನಯ್ಯನ ತೀರ್ಥನೈವೇದ್ಯಗಳನುಂಬುದಕೆ
ನಮ್ಮ ಜೊತೆಯಲಿ ಕುಳಿತು ಭುಜಿಸಿರಿ
ಸುಮ್ಮನೇ ಶ್ರಮವಾಯ್ತು ಹರಿಹರಿ !
ಉಮ್ಮಳಿಸಿದಿರಿ ಧರ್ಮ ಸೂಕ್ಷ್ಮವನರಿತು ವರ್ತಿಪುದು !

ಎಂದು ನುಡಿದರು. ಆಚಾರ್ಯನು ಶ್ರೀಮಠದ ಪದ್ಧತಿಯಂತೆ ಅಂದು ಸಾಸಿವೆಯುಕ್ತ ಸಾರನ್ನು ಭುಜಿಸಿ ಗುರುಕೃಪೆಗೆ ಪಾತ್ರನಾದನು. ಶ್ರೀಗಳವರ ಆಶೀರ್ವಾದ ಪಡೆದು ಫಲಮಂತ್ರಾಕ್ಷತೆ ತೆಗೆದುಕೊಂಡು ಸ್ವಗ್ರಾಮಕ್ಕೆ ಬಂದನು. ತಿರುಗಿ ಬಂದ ಶಿಷ್ಯನ ತೇಜಃಪುಂಜವಾದ ಮುಖವನ್ನು ಕಂಡು ಯಾದವಾರ್ಯರು, "ಆಚಾರ್ಯ ! ಶ್ರೀ ರಾಘವೇಂದ್ರರು ನಿಗ್ರಹಾನುಗ್ರಹ ಶಕ್ತರೆಂಬುದು ನೋಡಿದೆಯಾ ! ದಯಾನಿಧಿಗಳು. ಅವರ "ಕ್ಷಮಾಸುರೇಂದ್ರತ್ವವು" ಕಂಡೆಯಾ ! ಎಂಬುದಾಗಿ ಗುರುರಾಜರನ್ನು ಕೊಂಡಾಡಿದರು.

## ಮೂವರು ದೈವಜ್ಞರು

ಒಮ್ಮೆ ಮಲೆಯಾಳದೇಶದಿಂದ ಮೂವರು ದೈವಜ್ಞರು ಶ್ರೀಗಳವರ ದರ್ಶನಕ್ಕಾಗಿ ಬಂದರು. ಅವರು ಜ್ಯೋತಿಶ್ಶಾಸ್ತ್ರದಲ್ಲಿ ದೊಡ್ಡ ವಿದ್ವಾಂಸರು. ಶ್ರೀಗಳಿಗೆ ಸಾಷ್ಟಾಂಗವೆರಗಿ ತಮ್ಮ ಪರಿಚಯ ಮಾಡಿಕೊಟ್ಟರು. ಆಗ ಶ್ರೀಗಳವರು ಅವರಿಗೆ ತಮ್ಮ ಅಂಶಕುಂಡಲಿಯಿತ್ತು ಜಾತಕ ಫಲಗಳನ್ನು ತಿಳಿಸಲು ಹೇಳಿ, ಬೇರೆ ಬೇರೆ ಕೋಣೆಗಳಲ್ಲಿ ಕೂತು ಬರೆಯುವ ಏರ್ಪಾಡು ಮಾಡಿದರು.

ಜ್ಯೋತಿಷ್ಕರು ಜಾತಕಗಳನ್ನು ಸಿದ್ಧಪಡಿಸಿ ತಂದರು. ಶ್ರೀಗಳವರ ಅಪ್ಪಣೆ ಮೇರೆಗೆ ಪಂಡಿತರು ಆ ಜಾತಕಗಳನ್ನು ಪರಿಶೀಲಿಸಿದರು. ಎಲ್ಲಾ ಸರಿಯಾಗಿದೆ, ಆಯುರ್ದಾಯದ ವಿಷಯದಲ್ಲಿ ಲೆಕ್ಕ ತಪ್ಪಿದ್ದಾರೆ ಎಂಬುದಾಗಿ ಆಕ್ಷೇಪಿಸಿದರು. ಆಯುಷ್ಯವು ಒಬ್ಬರು ನೂರು ವರ್ಷವೆಂದು, ಮತ್ತೊಬ್ಬರು ಮುನ್ನೂರೆಂದು ಇನ್ನೊಬ್ಬರು ಏಳುನೂರೆಂದು ಬರೆದಿರುವುದು ಸೋಜಿಗವೆನಿಸಿತು !

ಆಗ ಶ್ರೀಗಳು ಹೀಗೆ ಅಪ್ಪಣೆ ಕೊಟ್ಟರು. "ಪಂಡಿತರೇ ! ಮೂವರೂ ಸರಿಯಾದ ಫಲಿತಗಳನ್ನೇ ಬರೆದಿರುತ್ತಾರೆ. ಈ ಜಾತಕ ನನ್ನದು.

1. ಭೌತಿಕ ದೇಹದಿಂದ ನೂರು ವರ್ಷವಿರುವೆವು.

2. ನಮ್ಮ ಕೃತಿಗಳು ಮುನ್ನೂರು ವರ್ಷಗಳವರೆಗೂ ಪ್ರಚಾರದಲ್ಲಿರುತ್ತವೆ.

3. ಬೃಂದಾವನದಲ್ಲಿದ್ದು ಭಕ್ತತತಿಯನ್ನು ರಕ್ಷಿಪುದು ಏಳು ನೂರು ವರ್ಷಗಳು.

ಎಂಬುದಾಗಿ ಸೂಕ್ಷ್ಮವನ್ನು ವಿವರಿಸಿ ದೈವಜ್ಞರನ್ನುಚಿತರೀತಿ ಸತ್ಕರಿಸಿ, ಕಳುಹಿದರು.

ಮಹಾತ್ಮರ ನಡೆ, ನುಡಿಯೆಲ್ಲವೂ ವಿಚಿತ್ರವಲ್ಲವೇ ?

## ಇಚ್ಛಾಭೋಜನ

ಶ್ರೀ ಗುರುರಾಜರು ಸಂಚಾರವನ್ನು ಮುಗಿಸಿಕೊಂಡು, ಪರಮ ಗುರುಗಳು ಬೃಂದಾವನಸ್ಥರಾದ ಕುಂಭಕೋಣೆಗೆ ಬಂದರು. ಶ್ರೀಗಳವರ ಮಹಾತ್ಮೆಶಿ ಯನ್ನು ಕೇಳಿ, ನಂಬದೆ, ಕಣ್ಣಾರ ಕಾಣಬೇಕೆಂದು ಉತ್ತರ ದೇಶದಿಂದ ಮೂವರು ಬ್ರಾಹ್ಮಣರು ಬಂದರು. ಅವರು ಭೋಜನಪ್ರಿಯರು. ತಮ್ಮ ಬಯಕೆಗಳನ್ನು ತಿಳಿದುಕೊಂಡು, ಇಚ್ಛಾಭೋಜನ ಮಾಡಿಸಬೇಕೆಂದು ಅವರು ಸಂಕಲ್ಪಿಸಿದರು.

ಆ ಬ್ರಾಹ್ಮಣರು ಶ್ರೀಗಳಿಗೆ ನಮಸ್ಕರಿಸಿ ನಿಂತರು. ಸ್ನಾನಾಹ್ನಿಕ ಗಳನ್ನು ಮುಗಿಸಿಕೊಂಡು ಬರಲು ಅಪ್ಪಣೆಯಾಯಿತು. ಅವರು ಸ್ನಾನಕ್ಕೆ ನದಿಗೆ ಹೊರಟರು. ದಾರಿಯಲ್ಲಿ ಸೇವಕನು ಶ್ರೀಗಳವರ ಶಾಟಿಗಳನ್ನು ತೆಗೆದುಕೊಂಡು ಬರುತ್ತಾ ಅವರೊಡನೆ ಸೇರಿ, ಬ್ರಾಹ್ಮಣರೇ ! ನೀವು ಬಯಸಿದ ಅಡುಗೆ ಸಿದ್ಧವಾಗಿದೆ. ಬೇಗನೆ ಸ್ನಾನ ಮುಗಿಸಿಕೊಂಡು ಬನ್ನಿ

ಎಂದನು. ಎಲ್ಲರೂ ನದಿಯನ್ನು ಸೇರಿದರು. ತಮ್ಮ ಮನೋಗತವಾಂಛಿತಗಳ ಅರಿವು ಆತನಿಗ್ಹೇಗಾಯಿತೆಂದು ಕೇಳಲು ಆತನು ತಾನೇನರಿಯೆನೆಂದು, ತಾನು ಮಾತನಾಡಲಿಲ್ಲವೆಂದು ಹೇಳಿದನು. ಆ ಹೊತ್ತಿಗೆ ಶಾಟಿಕೆಗಳನ್ನು ತೋಯಿಸಿ ಬಂಡೆಯ ಮೇಲಿಟ್ಟಿದ್ದನು.

ಅನಂತರ ಶಾಟಿಗಳನ್ನು ತನ್ನ ಭುಜದ ಮೇಲಿಟ್ಟು, ಅವರನ್ನು ಕಂಡು, ವಿಪ್ರರೇ ! ಬೇಗ ಬನ್ನಿ, ಅಡುಗೆ ಸಿದ್ಧವಾಗಿದೆ ಎಂದು ನುಡಿದನು. ಆಗ ಆ ವಿಪ್ರರು ಚಕಿತರಾದರು. ಶಾಟಿಗಳನ್ನು ಭುಜದ ಮೇಲಿಟ್ಟುಕೊಂಡು ತಮ್ಮ ವಿಷಯವನ್ನೆಲ್ಲಾ ಹೇಳಿದನು. ಅವು ಬಂಡೆಯ ಮೇಲಿಟ್ಟು, ಏನನ್ನೂ ಅರಿಯೆ ನೆಂದನು. ಕೇವಲ ಶ್ರೀಗಳವರ ಶಾಟಿಕಾಮಹಿಮೆಯೇ ಇಷ್ಟಾದರೆ, ಅವರ ಬಗ್ಗೆ ನಾವು ಶಂಕಿಸುವುದು ಮಹಾಪರಾಧ. ಅವರಲ್ಲಿ ಕ್ಷಮೆ ಬೇಡುವುದೇ ಸರಿ ಎಂದು ನಿರ್ಧರಿಸಿದರು.

ಆ ಬ್ರಾಹ್ಮಣರು ಮಠವನ್ನು ಸೇರಿ, ತೀರ್ಥವನ್ನು ತೆಗೆದುಕೊಂಡು ಪ್ರಸಾದಕ್ಕೆ ಕುಳಿತರು. ಶ್ರೀಗಳವರ ಅಪ್ಪಣೆಯಂತೆ, ಅವರಲ್ಲಿ ಒಬ್ಬರಿಗೆ ಪಾಯಸ ಒಬ್ಬರಿಗೆ ಕಡಬು, ಒಬ್ಬರಿಗೆ ಚಿತ್ರಾನ್ನವನ್ನು ಬಡಿಸಲಾಯಿತು. ಅವರು ತಮ್ಮ ಬಯಕೆ ಪೂರ್ಣವಾದುದಕ್ಕೆ ಲಜ್ಜಾವಿನಮ್ರವದನರಾಗಿ ಭೋಜನ ಮಾಡಿದರು. ಅನಂತರ ಶ್ರೀಗಳಿಗೆ ನಮಸ್ಕರಿಸಿ ಕ್ಷಮೆ ಬೇಡಿದರು.

ಆಗ ಶ್ರೀಗಳವರು ನಗುತ್ತಾ ! ನಮ್ಮನ್ನು ಪರೀಕ್ಷಿಸಿದ ನಿಮಗೆ ಶಿಕ್ಷೆ ಕೊಡುವೆವು. ಇಂದು ನೀವು ಬಯಸಿದ ಮೂರು ಭಕ್ಷ್ಯಗಳನ್ನು ನೀವು ಪ್ರತಿ ನಿತ್ಯ ಭುಜಿಸಿರಿ. ಮುಂದಿನ ಜನ್ಮಗಳಲ್ಲಿ ವಿಪ್ರರಾಗಿ ಪುಟ್ಟಿ ನಮ್ಮ ಬೃಂದಾ ವನಕ್ಕೆ ಅರ್ಚಕರಾಗಿ ಸದಾ ಇಚ್ಛಾಭೋಜನಮಾಡಿರಿ ಎಂದರು. ಅವರ ಸಂತತಿ ಯವರೇ ಈಗಲೂ ರಾಯರ ಬೃಂದಾವನಕ್ಕೆ ಅರ್ಚಕರು. ಪ್ರತಿ ನಿತ್ಯವು ಆ ಮೂರು ಭಕ್ಷ್ಯಗಳನ್ನು ಮಾಡಿ ರಾಯರಿಗೆ ನಿವೇದಿಸುವುದು ಸಾಂಪ್ರದಾಯವು ನಡೆದು ಬಂದಿದೆ.

## ರತ್ನಮಾಲಿಕೆ

ಶ್ರೀಗಳವರ ಮಾಹಾತ್ಮ್ಯೆಯನ್ನು ಕೇಳಿ, ಬಿಜಾಪುರದರಸನು ಅವರಿಗೊಂದು ರತ್ನಹಾರವನ್ನು ಕಾಣಿಕೆಯಾಗಿ ಕಳಿಸಿದನು. ಅದು ವೈಶ್ವದೇವದ ಸಮಯ. ಶ್ರೀಗಳು ಆ ಮಾಲಿಕೆಯನ್ನು ಅಗ್ನಿಕುಂಡದಲ್ಲಿ ಹಾಕಿ, ವೈಶ್ವಾನರನಿಗೆ ಅರ್ಪಿಸಿದರು.

ಅಮೂಲ್ಯವಾದ ರತ್ನಹಾರವನ್ನು ಯತಿಗಳು ಹಾಳುಮಾಡಿದರೆಂದು ಮಾತನಾಡಿದರು. ಈ ವಿಷಯ ಅರಸನ ಕಿವಿಗೆ ಬಿದ್ದಿತು. ಬಂದುಕೇಳಲು ಧೈರ್ಯಸಾಲದು. ಸುಮ್ಮನಿರಲು ಮನ ಒಪ್ಪದು. ಚಿಂತೆಗೀಡಾದನು.

ಯುಕ್ತಿಪರನಾದ ಆ ಸುಲ್ತಾನನು ಶ್ರೀಗಳವರನ್ನು ಕಂಡು, ಗುರೂಜೀ ! ಮೊನ್ನೆ ತಮಗೊಂದು ರತ್ನಹಾರವನ್ನು ಕಳುಹಿಸಿದ್ದೆ. ಅದರ ಮಾದರಿ ಮತ್ತೊಂದು ಮಾಡಿಸಬೇಕಾಗಿದೆ. ದಯಮಾಡಿ ಅದನ್ನುಕೊಟ್ಟರೆ ಮರಳಿ ಕೊಡುವೆನೆಂದನು.

ಶ್ರೀ ರಾಘವೇಂದ್ರರು, ವೈಶ್ವಾನರನನ್ನು ಪ್ರಾರ್ಥಿಸಿದರು. ತಕ್ಷಣ ಅಗ್ನಿದೇವನು ಪ್ರತ್ಯಕ್ಷನಾಗಿ ರತ್ನಹಾರವನ್ನಿತ್ತನು. ಅದನ್ನು ಶ್ರೀಗಳು ಅರಸನಿಗೆ ಇತ್ತರು. ಇವೆಲ್ಲವನ್ನು ಕಂಡು ನವಾಬನು ಬೆರಗಾದನು, ಗಾಬರಿಯಾದನು. ಆ ಮಾಲಿಕೆಯನ್ನು ಪುನಃ ಶ್ರೀಗಳವರಿಗೆ ಸಮರ್ಪಿಸಿ, ಕ್ಷಮೆ ಬೇಡಿದನು. ಕ್ಷಮಾಸಮುದ್ರರು ಪ್ರಸನ್ನರಾದರು.

**ಮಹಾತ್ಮರ ನಡೆನುಡಿಗಳು ಸಾಮಾನ್ಯರಿಗೆ ಅರ್ಥವಾಗುವುದಿಲ್ಲ !**

## ಬಹಿಷ್ಕೃತ ಬ್ರಾಹ್ಮಣ

ಶ್ರೀ ರಾಘವೇಂದ್ರರು ಸಂಚಾರದಲ್ಲಿ 'ಕಲ್ಲಡ ಕುರಣಿ' ಎಂಬ ಹಳ್ಳಿಗೆ ಬಂದರು. ಅಲ್ಲಿ ಓರ್ವಬ್ರಾಹ್ಮಣನು ಬಹಿಷ್ಕೃತನಾಗಿದ್ದನು. ಆತನು

ಶ್ರೀಗಳವರನ್ನು ಕಂಡು, ತನ್ನ ಗೋಳನ್ನು ಹೇಳಿಕೊಂಡು ಪರಿತಪಿಸಿ ಉದ್ಧರಿಸ ಬೇಕೆಂದು ವಿಜ್ಞಾಪಿಸಿದನು.

ಆ ಬ್ರಾಹ್ಮಣನು ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ಬಂದು ಶ್ರೀ ಮೂಲರಾಮರ ದರ್ಶನವನ್ನು ಪಡೆದನು. ತೀರ್ಥಪ್ರಸಾದಗಳನ್ನು ತೆಗೆದು ಕೊಂಡು ಗುರುಗಳಿಗೆ ಕಾಣಿಕೆ ಸಲ್ಲಿಸಿದನು. ಸಂತುಷ್ಟರಾದ ಶ್ರೀಗಳವರು ಆ ವಿಪ್ರನನ್ನು ಪುನೀತನಾಗಿದ್ದೀಯೆ, ಚಿಂತಸಬೇಡ ಹೋಗಿಬಾ ಎಂಬುದಾಗಿ ಅಪ್ಪಣೆ ಮಾಡಿದರು "**ಹಣವಿತ್ತರೆ ಗುಣಬರುವುದೇ ? ಪಾಪವು ಪರಿಹಾರವಾಗ್ವುದೇ ?** ಎಂಬುದಾಗಿ ಮಂದಮತಿಗಳು ಟೀಕೆಮಾಡಿದರು. ಇದು ಶ್ರೀಗಳಿಗೆ ತಿಳಿಯಿತು.

ಗುರುರಾಜರು, ಹಿರಿಯರನ್ನು ಪಂಡಿತರನ್ನು ಕರೆಸಿದರು. ಮಂದಮತಿಗಳೂ ಬಂದುಸೇರಿದರು. ಆಗ ಶ್ರೀಗಳು ಬಿಳಿಬಟ್ಟೆಯನ್ನು ತರಿಸಿ ಕೇರೆಣ್ಣೆಯಲ್ಲಿ ಕಪ್ಪುಮಾಡಿ ಎಲ್ಲರೂ ನೋಡುತ್ತಿರಲು ಶಂಖೋದಕವನ್ನು ಪ್ರೋಕ್ಷಿಸಿದರು. ಕಪ್ಪುವಸನವು ಮೊದಲಿನಂತೆ ಬಿಳುಪಾಯಿತು. ಬಟ್ಟೆಯಂತೆ ಬ್ರಾಹ್ಮಣನು ಸದಾಶುದ್ಧನಾಗಿದ್ದಾನೆ ಎಂದು ನುಡಿದರು. ಸಜ್ಜನರು ಗುರುಮಹಿಮೆಯನ್ನು ಕೊಂಡಾಡಿದರು.

## ಮೋಕ್ಷವಿತ್ತರು

ಶ್ರೀ ರಾಘವೇಂದ್ರರು ಮೈಸೂರು ರಾಷ್ಟ್ರದಲ್ಲಿ ಚಿತ್ರದುರ್ಗದಲ್ಲಿರುವಾಗ ವೆಂಕಣ್ಣನೆಂಬ ಶಿಷ್ಯನು ಗುರುರಾಜರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಕೈಜೋಡಿಸಿನಿಂತನು. ಏನುಬೇಕೆಂದು ಶ್ರೀಗಳು ಕೇಳಿದಾಗ "ಮೋಕ್ಷಬೇಕೆಂ" ದನು. ಆತನು ಹಿಂದೆ ಒಂದೆರಡುಸಲ ಹೀಗೆಯೆ ಕೇಳಿದ್ದನು. ಅವನ ಯೋಗ್ಯತೆಯನ್ನರಿತ ಗುರುಗಳು 'ಓಂ' ಎಂದು ನುಡಿದರು.

ಅನಂತರದಲ್ಲಿ ಚಿತಿ ಪೇರಿಸಲಾಯ್ತು. ವೆಂಕಣ್ಣನು ಸ್ನಾನಮುಗಿಸಿಕೊಂಡು ಬಂದನು. ಶ್ರೀಗಳ ಅಪ್ಪಣೆಯಂತೆ, ಅಗ್ನಿಪ್ರವೇಶಮಾಡಿದನು, ಆಗ ವಿಮಾನವು

ಬಂದಿತು. ವೆಂಕಣ್ಣನು ಅದರಲ್ಲಿ ಕುಳಿತು ಸ್ವರ್ಗಲೋಕಕ್ಕೆ ಪ್ರಯಾಣ ಮಾಡುತ್ತಾ ವಿಮಾನದ ಘಂಟೆಯನ್ನು ಬಾರಿಸಿದನಂತೆ. ಅಲ್ಲಿ ನೆರೆದಿದ್ದ ಜನಸಮೂಹವು ಘಂಟಾನಿನಾದವನ್ನು ಕೇಳಿದರಂತೆ !

**ಶ್ರೀ ಗುರುಸಾರ್ವಭೌಮರು ಮುಕ್ತಿದಾತರು !**

## ಕ್ಷಾಮನಿವಾರಣೆ

ಶ್ರೀಗಳವರು ತುರ್ಯಾಶ್ರಮವನ್ನು ಸ್ವೀಕರಿಸಿದ ತಂಜಾಪುರಕ್ಕೆ ಘೋರಕ್ಷಾಮವು ಬಂದಿತು. ರಘುನಾಥ ಭೂಪಾಲನ ಮಗನಾದ **ವಿಜಯ ರಾಘವನು** ರಾಜ್ಯಪಾಲನೆಮಾಡುತ್ತಿದ್ದನು. ದಾರಿತೋರದೆ ಶ್ರೀ ರಾಘವೇಂದ್ರರನ್ನೆ ಶರಣು ಪೊಕ್ಕನು.

ಗುರುರಾಜರು ತಂಜನಗರಿಗೆ ಪ್ರಯಾಣಮಾಡಿದರು. ಅರಮನೆಯಲ್ಲಿ ಶ್ರೀ ಮೂಲರಾಮರ ಪೂಜೆಮಾಡಿದರು. ದೇವದೇವನನ್ನು ಪ್ರಾರ್ಥಿಸಿದರು. ವರುಣದೇವರನ್ನು ಬೇಡಿದರು. ಧಾರಾಕಾರವಾಗಿ ಮಳೆಬಂದಿತು ಬಾವಿ ಕೆರೆಗಳು ತುಂಬಿದವು. ದ್ವಿಗುಣೀಕೃತವಾಗಿ ಬೆಳೆಬೆಳೆಯಿತು ! ಕ್ಷಾಮವು ಪರಿಹಾರವಾಯಿತು. ಪ್ರಜರು ಸಂತುಷ್ಟರಾದರು. ಪ್ರಭುವು ಯತೀಂದ್ರರನ್ನು ಸತ್ಕರಿಸಿ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದನು.

## ಶ್ರೀ ಕೃಷ್ಣದ್ವೈಪಾಯನ ಯತಿದರ್ಶನ

ಒಮ್ಮೆ ಶ್ರೀ ರಾಘವೇಂದ್ರರು ಹೇಳುತ್ತಿದ್ದ ಪಾಠವನ್ನು ಹಠಾತ್ತಾಗಿ ನಿಲ್ಲಿಸಿ, ಎದ್ದುನಿಂತು ಆಗಸದಕಡೆ ಕೈಜೋಡಿಸಿ, ಮಾತನಾಡಿ ಕುಳಿತುಕೊಂಡರು. ಶಿಷ್ಯರಿಗೆ, ಅದರ ರಹಸ್ಯವು ತಿಳಿಯದು. ವಿವರಿಸಬೇಕೆಂದು ವಿಜ್ಞಾಪಿಸಿದರು.

ಆಗ ಶ್ರೀಗಳು, "ಕೃಷ್ಣದ್ವೈಪಾಯನರೆಂಬ ಯತಿವರೇಣ್ಯರು ವೈಕುಂಠಕ್ಕೆ ಪ್ರಯಾಣಮಾಡಿದರು. ನಮಗೆ ದರ್ಶನವಿತ್ತರು. ನಾವು,

ಭೂಮಿಮೇಲಿ ಇನ್ನೆಷ್ಟುಕಾಲ ಇರುವೆವೆಂದು ಪ್ರಶ್ನಿಸಿದೆವು. ಅವರು ತಮ್ಮ ಬೆರಳೆರಡನ್ನು ಮೂರು ಬಾರಿ ತೋರಿದರು. ಎಂದರೆ ನಾವಿನ್ನು ಎರಡು ವರುಷ ಎರಡು ತಿಂಗಳು. ಎರಡು ದಿವಸಗಳಿರುವೆವೆಂದು ಅದರ ಅರ್ಥ" ವೆಂಬುದಾಗಿ ವಿವರಿಸಿದರು.

ಶೀಘ್ರದಲ್ಲೇ ಗುರುರಾಜರು ಕಣ್ಮರೆಯಾಗುವುರೆಂದು ಶಿಷ್ಯರು ಚಿಂತೆ ಮಾಡಿದರು. ಅವರನ್ನು "ನಾವು ಬೃಂದಾವನದಲ್ಲಿ ಸನ್ನಿಹಿತರಾಗಿದ್ದು ಭಕ್ತ ತತಿಯನ್ನು ಕಾಪಾಡುವೆವು, ಚಿಂತಿಸಬೇಕಾಗಿಲ್ಲ" ವೆಂದು ಸಮಾಧಾನಪಡಿಸಿದರು.

## ಮುಂಚಾಲೆ ಪಡೆದದ್ದು

ಶ್ರೀ ಗುರುರಾಜರು ಆದವಾನಿಗೆ ಬಂದರು. ದನಕಾಯುವ ವೆಂಕಣ್ಣನೇ ಆದವಾನಿಗೆ ದಿವಾನನಾಗಿದ್ದನಷ್ಟೆ ! ಶ್ರದ್ಧಾ ಭಕ್ತಿಗಳಿಂದ ಶ್ರೀ ಗುರುರಾಜರನ್ನು ವೈಭವದಿಂದ ತನ್ನ ಮನೆಗೆ ಸ್ವಾಗತಿಸಿದನು. ಶ್ರೀಗಳವರ ಭಿಕ್ಷೆ ಅಂದು ದಿವಾನ್ ವೆಂಕಣ್ಣ ಪಂತರಮನೆಯಲ್ಲಿ ಜರುಗಿತು. ಗುರುಗಳ ಮಹಿಮೆಯನ್ನು ಕೇಳಿ ಪರೀಕ್ಷಿಸಬೇಕೆಂದು, ನವಾಬನಾದ ಅಬ್ದುಲ್ಲಾಖಾನನು ಬಂದನು.

ನವಾಬನು ಮಾಂಸ ಮದ್ಯಗಳನ್ನು ತೆಗೆದುಕೊಂಡು ಬಂದನು. ಕಾಣದಂತೆ ವಸ್ತ್ರವನ್ನು ಮುಚ್ಚಿತರಿಸಿದನು. ಗುರುರಾಜರಿಗೆ ಸಲಾಂ ಮಾಡಿ ನಿಂತನು. ಕಾಣಿಕೆಯನ್ನು ದೇವರಿಗೆ ಸಮರ್ಪಿಸಬೇಕೆಂದನು.

ಸರ್ವಜ್ಞರಾದ ಗುರುರಾಜರು, ನವಾಬನ ಕಪಟ ಬುದ್ಧಿಯನ್ನು ತಿಳಿದು, ಶಂಖೋದಕವನ್ನು ತಟ್ಟೆಯಮೇಲೆ ಪ್ರೋಕ್ಷಿಸಿ, ಕಾಣಿಕೆ ರಾಮದೇವರಿಗೆ ಅರ್ಪಿತವಾಯಿತು ಫಲವನ್ನುತೆಗೆದುಕೊಳ್ಳಬಹುದೆಂದರು.

ನವಾಬನು ಆತುರದಿಂದ ತಟ್ಟೆಯ ಮುಸುಕನ್ನು ತೆಗೆದನು. ಮಾಂಸ ಮದ್ಯಗಳಿಗೆ ಬದಲು ಫಲ ಪುಷ್ಪಗಳು ಪಾನೀಯುಗಳಿರುವುದನ್ನು ಕಂಡು ನಾವಬನು ಭಯಭ್ರಾಂತನಾದನು. ಗರುಗಳಿಗೆ ಸಲಾಂ ಮಾಡಿ ಹೊರಟುಹೋದನು.

ನವಾಬನು ಭೋಜನಾನಂತರದಲ್ಲಿ ದಿವಾನನನ್ನು ಕರೆಸಿ "ವೇಂಕಣ್ಣಾ" ನಿಮ್ಮ ಗುರುಗಳು ಮಹಾತ್ಮರಿದ್ದಾರೆ ! ಸಂತಸವಾಯಿತು ! ಅವರ ಬಯಕೆ ಪೂರ್ಣಮಾಡುವೆವು. ತಿಳಿದುಕೊಂಡು ಬಾ ಎಂದನು. ಗುರುರಾಜರು ಬಯಸಿದಂತೆ ಚಿಕ್ಕಹಳ್ಳಿಯಾದ ಮಂಚಾಲೆಯನ್ನೆ ಅವರಿಗೆ ಜಾಹಗೀರು ಕೊಟ್ಟನು.

## ಬೃಂದಾವನ ಪ್ರವೇಶ

ಶ್ರೀ ರಾಘವೇಂದ್ರರು ಬೃಂದಾವನ ಪ್ರವೇಶಮಾಡುವರೆಂಬ ಸುದ್ದಿ ಎಲ್ಲೆಡೆ ಹಬ್ಬಿತು. ಇತರರ ಮೃತ್ಯುವನ್ನು ನಿವಾರಿಸುವ ಗುರುರಾಜರಿಗೆ ಸಮಾಧಿಯೇಕೆ ? ಜೀವಿಸಿರುವಾಗಲೇ ಬೃಂದಾವನದ ಮಾತೇಕೆ ? ಎಂಬುವವರು, ಗುರುರಾಜರ ತುದಿದರ್ಶನವನ್ನು ಪಡೆಯಬೇಕೆಂಬ ಆಶೆಯಿಂದ ಭಕ್ತಜನರು ತಂಡತಂಡವಾಗಿ ಬಂದು ಮಂಚಾಲೆಯನ್ನು ಸೇರಿದರು.

ಮಂತ್ರಾಲಯಕ್ಕೆ ಐದುಮೈಲಿದೂರದಲ್ಲಿರುವ ಮಾಧವರದ ಹಳ್ಳದ ದಡೆಯಲ್ಲಿದ್ದ ಒಂದು ಶಿಲೆಯಮೇಲೆ ಶ್ರೀರಾಮಚಂದ್ರನು ಏಳುಘಳಿಗೆಗಳ ಕಾಲ ವಿಶ್ರಮಿಸಿದ್ದನಂತೆ. ಆ ಶಿಲೆಯು ಕಲಿಯುಗದಲ್ಲಿ ಏಳುನೂರಬ್ದಗಳು ಪೂಜಿಸಲ್ಪಡುವುದೆಂಬುದಾಗಿ ಐತಿಹ್ಯ. ದಿವಾನ್ ವೆಂಕಣ್ಣನು ಆ ಶಿಲೆಯಿಂದ ಶ್ರೀ ಗುರುರಾಜರಿಗೆ ಬೃಂದಾವನವನ್ನು ನಿರ್ಮಾಣಮಾಡಿಸಿದನು. ಉಳಿದ ಬಂಡೆಯಿಂದ ಪ್ರಾಣದೇವರ ವಿಗ್ರಹವನ್ನು ಮಾಡಿಸಿ, ಗುರುರಾಜರ ಬೃಂದಾವನದ ಮುಂಭಾಗದಲ್ಲಿ ಪ್ರತಿಷ್ಠಿಸಲಾಗಿದೆ.

ಭಕ್ತರು, ಶಿಷ್ಯರು, ಆಸ್ತಿಕರು, ಶ್ರೀಗಳವರ ದರ್ಶನಪಡೆದು, ಸಾಷ್ಟಾಂಗ ಪ್ರಣಾಮಮಾಡಿ, ಫಲಮಂತ್ರಾಕ್ಷತೆಯನ್ನು, ಆಶೀರ್ವಾದವನ್ನು ಪಡೆದು ಪುನೀತರಾದರು. ಅವರೇ ಧನ್ಯರು. ಶ್ರೀ ರಾಘವೇಂದ್ರರು ಯೋಗ್ಯನಾದ ಶಿಷ್ಯನಿಗೆ ಆಶ್ರಮವನ್ನಿತ್ತು ಯೋಗೀಂದ್ರನೆಂಬ ಅಭಿದಾನದಿಂದ ಕರೆದರು. ಗುರುರಾಜರು ತಮ್ಮ ಎಪ್ಪತ್ತನೇವಯಸ್ಸಿನಲ್ಲಿ, ಶ್ರೀ ವಿರೋಧಿ

ಕೃಷ್ಣಾಂಗಾರಕ ಬಹುಳ ಬಿದಿಗೆ ಗುರುವಾಸರದಲ್ಲಿ ಸಶರೀರವಾಗಿ ಬೃಂದಾವನ ಪ್ರವೇಶಮಾಡಿದರು. ಬೃಂದಾವನದಲ್ಲಿ ಏಳುನೂರು ಸಾಲಗ್ರಾಮಗಳನ್ನು ಹಾಕಿ ಮೇಲ್ಬಂಡೆಯನ್ನು ಮುಚ್ಚಿದರು. ಗುರುರಾಜರು ಬೃಂದಾವನದಲ್ಲಿ ಸನ್ನಿಹಿತರಾಗಿದ್ದು, ಸೇವಿಪ ಭಕ್ತಜನರ ವಾಂಛಿತಾರ್ಥಗಳನ್ನು ಏಳೂನೂರು ವರ್ಷಗಳವರಿಗೂ ಪೂರ್ಣಮಾಡುವರೆಂದು ಸೂಚಿಸಲೋ ಎಂಬಂತೆ ಬೃಂದಾವನದಲ್ಲಿ ಏಳುನೂರು ಸಾಲಗ್ರಾಮಗಳನ್ನು ಹಾಕಿರುತ್ತಾರೆಂಬುದಾಗಿ ಪ್ರಾಜ್ಞರು ತಿಳಿಸುವರು.

## ಶ್ರೀ ರಾಘವೇಂದ್ರ ಸ್ತೋತ್ರ

ಶ್ರೀ ಗುರುರಾಜರ ಶಿಷ್ಯಕೋಟಿಯಲ್ಲಿ ಶ್ರೀ ಅಪ್ಪಣಾಚಾರ್ಯರು ಪ್ರಮುಖರು, ಹಾಗು ರಾಯರ ಪ್ರೀತಿಗೆ ಪಾತ್ರರಾದ ಮಹಾವಿದ್ವಾಂಸರು. ಶ್ರೀಗಳವರು ಬೃಂದಾವನ ಪ್ರವೇಶಮಾಡುವುದಕ್ಕೆ ಮುಂಚಿತವಾಗಿ ಅಪ್ಪಣಾಚಾರ್ಯರನ್ನು 'ಬಿಚ್ಚಾಲೆ' ಎಂಬ ಗ್ರಾಮಕ್ಕೆ ಕಳುಹಿಸಿರುತ್ತಾರೆ ! ಆಚಾರ್ಯರು ಹಿಂದಿರುಗಿ ಬರುವ ದಾರಿಯಲ್ಲಿ ಶ್ರೀಗಳು ಬೃಂದಾವನ ಪ್ರವೇಶಮಾಡಿದರೆಂಬ ವಾರ್ತೆಯು ತಿಳಿದು ಬಂದು ಗುರುವಿಯೋಗವನ್ನು ತಡೆಯಲಾಗಲಿಲ್ಲ. ಗುರುರಾಜರ ತುದಿದರುಶನವೂ ತಮಗೆ ಲಭಿಸಲಿಲ್ಲವೆಂಬ ಚಿಂತೆಯಿಂದ ದುಃಖಿತರಾಗಿ ಅಲ್ಲಿಂದಲೇ ಶ್ರೀ ಗುರುರಾಜರ ಸ್ತೋತ್ರವನ್ನು ರಚನೆ ಮಾಡುತ್ತಾ ಬಂದರು, ಗುರುಸ್ತುತಿಯು

**ಶ್ರೀ ಪೂರ್ಣಬೋಧಗುರುತೀರ್ಥ ಪಯೋಬ್ಧಿಪಾರಾ !**

ಎಂಬುದಾಗಿ ಪ್ರಾರಂಭವಾಯಿತು, ಆಚಾರ್ಯರು ಶ್ರೀ ಮಠವನ್ನು ಸೇರಿ ಶ್ರೀ ಗುರುಸಾರ್ವಭೌಮರ ದಿವ್ಯಬೃಂದಾವನದ ಮುಂದೆ ಬಂದು ನಿಲ್ಲುವ ಸಮಯಕ್ಕೆ

**ವಿಭೂತಿರತುಲಾ !**

ಎಂಬ ಪದದಿಂದ ಸ್ತುತಿಯು ನಿಂತಿತು ! ಗುರುಗಳನ್ನು ನೋಡಲು ಬಂದ ಆಚಾರ್ಯರಿಗೆ ಗುರುರಾಜರ ಬೃಂದಾವನವನ್ನೇ ನೋಡಬೇಕಾಯಿತು !

ಸಂಕಟವನ್ನು ತಡೆಯಲಾಗಲಿಲ್ಲ. ಸ್ತಬ್ಧರಾಗಿ ಶ್ರೀ ಬೃಂದಾವನದ ಮುಂದೆ ಕೈಜೋಡಿಸಿಕೊಂಡು ನಿಂತರು. ಶಿಷ್ಯನಮೇಲೆ ಗುರುಗಳಿಗಿರುವ ವಾತ್ಸಲ್ಯವು ಹಿರಿದಾದದ್ದು. ಶಿಷ್ಯನ ಮನಃ ಪ್ರವೃತ್ತಿಯನ್ನು ಬಲ್ಲವರಷ್ಟೆ ಶ್ರೀ ಗುರುರಾಜರು. ಅಪ್ಪಣಾಚಾರ್ಯರು ಗುರುಸ್ತುತಿಯಲ್ಲಿ ಅಪ್ಪಣೆಕೊಟ್ಟಂತೆ ಸಕಲವೂ ಸಮ್ಮತ ವೆಂತಲೂ,ಸತ್ಯವೆಂತಲೂ ಸೂಚಿಸಿ ವ್ಯಕ್ತಪಡಿಸಲೋ ಎಂಬತೆ ಶ್ರೀ ಗುರುರಾಜರ ಬೃಂದಾವನದಿಂದ

"ಸಾಕ್ಷೀಹಯೊ ಸ್ತ್ಯೋತ್ರಹಿ"

ಎಂಬ ಸಪ್ತವರ್ಣಾತ್ಮಕವಾದ ಅನುಗ್ರಹವಚನವು ಬಂದಿತು. ಗುರು ಸ್ತುತಿಯು ಅಪೂರ್ಣವಾಗಿ ನಿಂತಿದ್ದು ಬೀಜಾಕ್ಷರಗಳಿಂದ ಪೂರ್ಣವಾಯಿತು ! ಆಚಾರ್ಯರು ಗುರುಸ್ತೋತ್ರದಲ್ಲಿ ಅಪ್ಪಣೆಕೊಟ್ಟದ್ದು ಸತ್ಯವೆಂಬ-ದಾಗಿಯು ಅದಕ್ಕೆ ತಮ್ಮ ಉಪಾಸ್ಯಮೂರ್ತಿಯಾದ ಶ್ರೀ ಹಯವದನನೇ ಸಾಕ್ಷಿ ಎಂಬು ದಾಗಿಯು ಬೀಜಾಕ್ಷರಗಳಿಗೆ ಅರ್ಥವನ್ನು ಹೇಳುತ್ತಾರೆ !

ಶ್ರೀ ರಾಘವೇಂದ್ರ ಸ್ತೋತ್ರವನ್ನು ಶ್ರೀ ಗುರುರಾಜರ ಭಕ್ತರು ಪ್ರತಿದಿನ ಪಠಿಸುವುದು ಪಾರಾಯಣಮಾಡುವುದು, ನಾವು ನೋಡುವೆವು. ಶ್ರೀ ಗುರು ಸ್ತೋತ್ರ ಪಾರಾಯಣದಿಂದ, ಸಕಲ ಅನಿಷ್ಟನಿವೃತ್ತಿಯು, ಪಿಶಾಚಾದಿ ಬಾಧಾ ನಿವಾರಣೆಯು ಆಗುವುದಲ್ಲದೆ ಇಷ್ಟಾರ್ಥಸಿದ್ಧಿಯಾಗುವುದನ್ನೂ ಕೇಳಿದ್ದೇವೆ. ಕಣ್ಣಾರೆಕಂಡಿದ್ದೇವೆ. ಶ್ರೀ ವಾಯುಸ್ತುತಿಯಂತೆ ಶ್ರೀ ರಾಘವೇಂದ್ರ ಸ್ತೋತ್ರವು ಸಿದ್ಧಿಮಂತ್ರಗಳಲ್ಲಿ ಒಂದೆಂಬುದಾಗಿ ಪ್ರಸಿದ್ಧಿಯಾಗಿದೆ !

ಶ್ರೀಮದಪ್ಪಣಾಚಾರ್ಯರು ಘನವಿದ್ವಾಂಸರು. ಶ್ರೀ ಗುರುಸ್ತುತಿಯನ್ನು ರಚಿಸಿದರು. ಶ್ರೀ ರಾಘವೇಂದ್ರಮಂಗಲಾಷ್ಟಕವನ್ನು ಬಹು ಪ್ರೌಢಶೈಲಿಯಲ್ಲಿ ರಚಿಸಿರುತ್ತಾರೆ. ಗುರುಸ್ತುತಿಯನ್ನು, ಅಷ್ಟಕವನ್ನು ಶ್ರೀ ಗುರುರಾಜರ ಪಲ್ಲಕೀ ಸೇವಾಕಾಲದಲ್ಲಿ ಪಠಿಸುವ ಪದ್ಧತಿಯು ರೂಢಿಯಲ್ಲಿದೆ ! ಅಷ್ಟಕದಲ್ಲಿ ಒಂದು ಶ್ಲೋಕದಲ್ಲಿ ಅಪ್ಪಣಾಚಾರ್ಯರು 'ಮಂತ್ರಾಲಯಾಖ್ಯೇ ಪುರೇ' ಎಂಬುದಾಗಿ

ತುಂಬಾ ಚಿಕ್ಕಹಳ್ಳಿಯಾದ ಮಂಚಾಲೆಯನ್ನು ಪುರವೆಂದು ಸಂಬೋಧಿಸಿರುತ್ತಾರೆ! ಮಂತ್ರಾಲಯ ಪ್ರಭುಗಳು ನೆಲಸಿದ ಪುಣ್ಯಭೂಮಿ ವೈಭವೋಪೇತವಾದದ್ದು. ಶ್ರೀ ಪ್ರಹ್ಲಾದರಾಜರು ಯಜ್ಞಮಾಡಿದಸ್ಥಲ. ಸೇವಿಪ ಭಕ್ತಜನರ ಮನೋಭೀಷ್ಟಗಳನ್ನು ಕಲ್ಪವೃಕ್ಷ-ಕಾಮಧೇನು - ಚಿಂತಾಮಣಿಗಳಂತೆ ಪೂರ್ಣ ಮಾಡುವರು ಶ್ರೀ ಗುರುಸಾರ್ವಭೌಮರು. ಆ ಮಹಾನುಭಾವರು ನೆಲಸಿದ ಕ್ಷೇತ್ರರಾಜವು ವೈಭವಗಳಿಗೆ ಹೆಸರಾದ ನಾಕಲೋಕಕ್ಕೆ ಸಮವೆಂದರೆ ತಪ್ಪಾಗುವುದೇ ? ಸುರೇಂದ್ರನ ರಾಜಧಾನಿಯಷ್ಟೆ ದುರ್ಲಭವಾದದು ಕ್ಷಮಾಸುರೇಂದ್ರರು ನಿಂತಿರುವ ಮಂತ್ರಾಲಯ. ಆದ್ದರಿಂದ ಅಪ್ಪಣಾಚಾರ್ಯರು ಅಷ್ಟಕದಲ್ಲಿ ಮಂತ್ರಾಲಯಖ್ಯೇ ಪುರೇ ಎಂಬುದಾಗಿ ವರ್ಣಿಸಿರುವುದು ಸಮಂಜಸರಷ್ಟೆ !

ರಂಗೋತ್ತುಂಗತರಂಗ
ಮಂಗಳಕರ ಶ್ರೀ ತುಂಗಭದ್ರಾ ತಟ |

ಪ್ರತ್ಯಸ್ಥ ದ್ವಿಜ ಪುಂಗವಾಲಯ
ಲಸನ್ಮಂತ್ರಾಲಯಾಖ್ಯೇ ಪುರೇ ||

ನವ್ಯೇಂದ್ರೋಪಲ ನೀಲಭವ್ಯ
ಕರಸದ್ಬೃಂದಾವನಾಂತರ್ಗತಃ |

ಶ್ರೀಮತ್ಸದ್ಗುರು ರಾಘವೇಂದ್ರ
ಯತಿರಾಟ್ ಕುರ್ಯಾಧ್ರುವಂ ಮಂಗಳಂ ||

## ಗುರು ಗುಣಸ್ತುತಿ

ಮಂತ್ರಾಲಯದಲ್ಲಿ ಶ್ರೀ ಗುರುಸಾರ್ವಭೌಮರ ದಿವ್ಯಬೃಂದಾವನದ ಪಕ್ಕದಲ್ಲಿ ಶ್ರೀ ವಾದೀಂದ್ರತೀರ್ಥರ ಬೃಂದಾವನವನ್ನು ಕಾಣುವೆವು, ಶ್ರೀ

ವಾದೀಂದ್ರರು ಶ್ರೀ ಗುರುರಾಜರ ಉಭಯ ವಂಶಾಬ್ಧಿಚಂದ್ರಮರು. ರಾಯರ ಪೂರ್ವಾಶ್ರಮದ ಮರಿಮಕ್ಕಳು. ಮಹಾಸುಕೃತಿಗಳೆಂಬುದಕ್ಕೆ ಗುರುರಾಜರ ಪಕ್ಕದಲ್ಲೇ ಅವರಿಗೆ ಸ್ಥಲವು ದೊರೆತಿರುವುದು ಸಾಕ್ಷಿಯಾಗಿದೆ! ದಿವಾನ್ ವೆಂಕಣ್ಣ ಪಂತನು ಶ್ರೀ ಗುರುರಾಜರಿಗಾಗಿ ಮುದ್ದಾದ ಬೃಂದಾವನವನ್ನು ಸಿದ್ಧಪಡಿಸಿದನು. ಆದರೆ ಆದು ತಮಗೆಬೇಡವೆಂದರು ರಾಯರು. ಕಾರಣಾಂತರ ದಿಂದ ಆದನ್ನು (ತಮ್ಮ ಮರಿಮಕ್ಕಳಾದ ಶ್ರೀನಿವಾಸಾಚಾರ್ಯರಿಗೆ) ಶ್ರೀ ವಾದೀಂದ್ರ ಯತಿಚಂದ್ರಮರಿಗೆಂದು ಅಂದೇ ಮೀಸಲಾಗಿಟ್ಟರು. ಎಂದರೆ ವಾದೀಂದ್ರರ ಮೇಲೆ ಗುರುರಾಜರಿಗೆ ಇರುವ ವಾತ್ಸಲ್ಯವು ತಿಳಿಯುವುದಷ್ಟೆ!

ಶ್ರೀ ವಾದೀಂದ್ರರು ಪೀಠಸ್ಥರಾದಾಗ ಶ್ರೀ ಗುರುಗುಣಸ್ತುತಿಯನ್ನು ರಚಿಸಿದರು. ಸ್ತುತಿಯು ಬಹು ಪ್ರೌಢಶೈಲಿಯಲ್ಲಿ ರಚಿಸಲಾಗಿದೆ. ಧಾಟಿಯು ವಾಯುಸ್ತುತಿಯಂತೆ ಇರುತ್ತದೆ! ಇದರಲ್ಲಿ ಶ್ರೀ ಗುರುರಾಜರ ಮಹಿಮೆಯನ್ನು ಅವರ ಕಾವ್ಯರಚನಾ ವೈಶಿಷ್ಟ್ಯವನ್ನು ವರ್ಣಿಸಲಾಗಿದೆ. ರಾಯರು ಶ್ರೀ ಪರಿ ಮಳಾದಿ ಕೃತಿಗಳನ್ನು ರಚಿಸಿದರಷ್ಟೆ! ಕಾವ್ಯರಚನೆಯ ಕಾಲದಲ್ಲಿ ಗುರುರಾಜರು ಒಮ್ಮೆ ಬರೆದದ್ದನ್ನು ಅಳಿಸಲಿಲ್ಲ - ಪುನರುಕ್ತಿದೋಷವೂ ಇಲ್ಲದಂತೆ ರಚಿಸಿದ ರೆಂಬುದನ್ನು ಹೃದಯಂಗಮವಾಗಿ ಶ್ರೀ ವಾದೀಂದ್ರರು ಗುರುಗುಣಸ್ತುತಿಯಲ್ಲಿ ಬಣ್ಣಿಸಿರುತ್ತಾರೆ! ಅದು ಹೀಗಿದೆ!

> "ಉಕ್ತಂನೋ ವಕ್ತಿಭೂಯಃ ಕ್ವಚಿದಪಿ
> ಲಿಖಿತಂ ನೈವ ನಿರ್ಮಾಷ್ಟಿ ತಸ್ಮಾದಸ್ಮಾಭಿಃ
> ಸತ್ಪ್ರಬಂಧ ಪ್ರಣಯನ ವಿಷಯೇ
> ಸ್ತೂಯತೇ ರಾಘವೇಂದ್ರಃ"

1. ಶ್ರೀ ವೀಣಾವೆಂಕಟಭಟ್ಟರು (ಶ್ರೀ ಗುರುಸಾರ್ವಭೌಮರು)
2. ಶ್ರೀ ಲಕ್ಷ್ಮೀನಾರಾಯಣಾಚಾರ್ಯರು
3. ಶ್ರೀ ಪುರುಷೋತ್ತಮಾಚಾರ್ಯರು
4. ಶ್ರೀನಿವಾಸಾಚಾರ್ಯರು (ಶ್ರೀ ವಾದೀಂದ್ರತೀರ್ಥರು)

ಶ್ರೀ ವಾದೀಂದ್ರರು ತಾವು ರಚಿಸಿದ **ಗುರುಗುಣಸ್ತುತಿ**ಯನ್ನು ಗುರುರಾಜರ ಬೃಂದಾವನದ ಮುಂದೆ ಬಂದುನಿಂತು ಪಠಿಸಿದಾಗ ಬೃಂದಾವನವೇ ಕದಲಿತೆಂಬ ಐತಿಹ್ಯ ಉಂಟು. ತುತಿಯು ತಮ್ಮ ಮೆಚ್ಚಿಗೆಗೆ ಪಾತ್ರವಾಯಿತೆಂದು ಬೃಂದಾವನದಿಂದ ಶ್ರೀ ರಾಯರು ಶಿರಃಕಂಪನವಮಾಡಿದರಂತೆ. ಆಗ ಬೃಂದಾವನವೇ ಒರಗಿತೆಂಬುದಾಗಿ ತಿಳಿಸುವರು. ಅಗಮ್ಯಮಹಿಮರ ಮಹಾಮಹಿಮೆಯನ್ನು ವರ್ಣಿಸಿ ಪ್ರಶಂಸೆಗೆ ಪಾತ್ರರಾದ ಶ್ರೀ ವಾದೀಂದ್ರರ ಸುಕೃತವನ್ನೇನೆಂದು ವರ್ಣಿಸೋಣ !

ನಿಮ್ಮ ಮರಿಮಗ **ವಾದೀಂದ್ರ** ನಿಯಮಿನಿಮಗೆ
ಗುರುಗುಣಸ್ತುತಿ ಕೃತಿಯಿೂವ ತರುಣದಲ್ಲಿ
ಮುದದಿನಿಮ್ಮ ಬೃಂದಾವನವೆ ಕದಲಿತಂತೆ !
ಶ್ಲಾಘನೀಯವೈ ತತ್ಕೃತಿ **ರಾಘವೇಂದ್ರ** !

## ಮೂಕ ಟಿಪ್ಪಣಿ

ವ್ಯಾಸತತ್ವಜ್ಞತೀರ್ಥರೆಂಬ ಯತಿಗಳು ಶಿಷ್ಯರಿಗೆ **ಶ್ರೀ ಸುಧಾ** ಪಾಠವನ್ನು ಹೇಳುತ್ತಿದ್ದರು. ಒಂದು ದಿನ ಒಂದು ವಾಕ್ಯಕ್ಕೆ ಸರಿಯಾದ ಅರ್ಥವು ಭಾಸವಾಗಲಿಲ್ಲ. ಆ ವಿಷಯವನ್ನು ಶಿಷ್ಯರಿಗೆ ತಿಳಿಸಿ ಪಾಠಕ್ಕೆ ಶಾಂತಿ ಹೇಳಿದರು. ಶ್ರೀ ಮಂತ್ರಾಲಯ ಪ್ರಭುಗಳು ರಚಿಸಿದ **ಪರಿಮಳ** (ಸುಧೆಗೆ ಟಿಪ್ಪಣಿ) ಯನ್ನು ಅವಲೋಕಿಸಬೇಕೆಂದು ಶಿಷ್ಯರು ವಿಜ್ಞಾಪಿಸಿದರು. ಆದರೆ ತಾತ್ಸಾರ ಬುದ್ಧಿಯುಳ್ಳ ವ್ಯಾಸತತ್ವಜ್ಞರು ಅದೊಂದು "**ಮೂಕ ಟಿಪ್ಪಣಿ**" ಅದರಲ್ಲೇನಿದೆ ಎಂಬುದಾಗಿ ಉದಾಸೀನದಿಂದ ನುಡಿದು ಪಾಠಮುಗಿಸಿ ನಿವಾಸಸ್ಥಾನಕ್ಕೆ ಹೊರಟರು.

ಅದೇ ರಾತ್ರಿ ವ್ಯಾಸತತ್ವಜ್ಞರಿಗೆ ಸ್ವಪ್ನವಾಯಿತು. ಸ್ವಪ್ನದಲ್ಲಿ ರಾಯರು ದರ್ಶನವಿತ್ತು,

"ತೀರ್ಥಾ" ಮೂಕಟಿಪ್ಪಣಿಯನ್ನು ನೋಡು ನಿನ್ನ ಸಂದೇಹವು ನಿವಾರಣೆಯಾಗಬಹುದೇನೋ" ಎಂಬುದಾಗಿ ಸೂಚಿಸಿದರು. ಮರುದಿನ ಪಾತಃಕಾಲಕ್ಕೆ ಶಿಷ್ಯರಿಗೆ ಸ್ವಪ್ನ ವೃತ್ತಾಂತವನ್ನರುಹಿ ಪರಿಮಳವನ್ನು ತರಿಸಿನೋಡಿದರು. ಅದರಲ್ಲಿ ತಮಗೆ ಹಿಂದಿನ ದಿನ ಸಂಶಯಬಂದ ವಾಕ್ಯಕ್ಕೆ ಸರಳಸುಂದರವಾದ ವ್ಯಾಖ್ಯಾನವಿರುವುದನ್ನು ಕಂಡು, ಸಂತಸಪಟ್ಟು ವ್ಯಾಸತತ್ವಜ್ಞರು ತಮ್ಮ ತಪ್ಪು ತಿಳುವಳಿಕೆಗೆ ಪಶ್ಚಾತ್ತಾಪ ಪಟ್ಟರು. ಅಂದಿನಿಂದ ಶ್ರೀ ಸುಧಾ ಪಾಠವನ್ನು ಪರಿಮಳವನ್ನು ಪಠಿಸಿ ಅದಕ್ಕನುಗುಣವಾಗಿ ಹೇಳಲಾರಂಭಿಸಿದರು. ಪರಿಮಳವನ್ನು ಪೂಜೆ ಮಾಡಿದರು. ತತ್ಕೃತಿಕರ್ತರಾದ ಪರಿಮಳಾಚಾರ್ಯರನ್ನು ವಿಶೇಷ ಗೌರವದಿಂದ ಕಾಣಲಾರಂಭಿಸಿದರು. ಗುಣಕ್ಕೆ ಮತ್ಸರವೇ ? ಎಂಬಂತೆ ವರ್ತಿಸಿದರು ತತ್ವಜ್ಞತೀರ್ಥರು.

ವ್ಯಾಸತತ್ವಜ್ಞ ತೀರ್ಥಾಖ್ಯಯತಿ ಅದೊಮ್ಮೆ
ಪರಿಮಳವು ಮೂಕಟಿಪ್ಪಣಿಎಂದ ಅಂದು
ರಾತ್ರಿ ಕನಸಿಲಿ ನೀಪೇಳೆ ತಿಳಿದು ನೋಂದು
ನಮಿಸಿ ನುತಿಗೈದ ವಿನಯದಿ ರಾಘವೇಂದ್ರ !

## ಗುರುರಾಜರು ಮೌನವನ್ನು ತಾಳಿದರು.

ಶ್ರೀ ಪ್ರಹ್ಲಾದರಾಜರ ತಮ್ಮಂದಿರೇ ಶ್ರೀ ಸಂಹ್ಲಾದರಾಜರು. ಕಲಿಯಲ್ಲಿ ಪ್ರಹ್ಲಾದರು, ಶ್ರೀ ರಾಘವೇಂದ್ರರಾಗಿ ಅವತಾರಮಾಡಿದರು. ಅದೇ ಸಮಯದಲ್ಲಿ ಸಂಹ್ಲಾದರಾಜರ ಅವತಾರವಾಯಿತು. ಶ್ರೀ ಜಗನ್ನಾಥದಾಸರೆಂಬ ಅಭಿದಾನದಿಂದ. ದಾಸರು ಘನ ವಿದ್ವಾಂಸರು. ಯೌವನದಲ್ಲಿ ಭೃಗುಮಹರ್ಷಿ ಅಂಶಸಂಭೂತರಾದ ಶ್ರೀ ವಿಜಯದಾಸರ ನಿಂದೆಮಾಡಿ ಪರಿಣಾಮ ಶೂಲಿಗೆ ಗುರಿಯಾದರು. ರಾಯರನ್ನೆಮೊರೆಹೊಕ್ಕರು, ಪ್ರಯೋಜನವಾಗಲಿಲ್ಲ. ನಿವೃತ್ತಿ ಮಾರ್ಗವನ್ನು ಮಾತ್ರ ತಿಳಿಸಿ ಶ್ರೀ ವಿಜಯದಾಸರಲ್ಲಿಗೆ ಕಳುಹಿದರು ರಾಯರು. ಕ್ಷಮಾಸಮುದ್ರರಾದ ವಿಜಯದಾಸರಿವರಿಗೆ ಪರಿಣಾಮಶೂಲೆಯನ್ನು ನಿವಾರಣೆಮಾಡಿದ್ದಲ್ಲದೆ, ಅಲ್ಪಾಯುಸ್ಕರೆಂಬುದನ್ನರಿತು, ಶಿಷ್ಯರಾದ ಗೋಪಾಲ

ದಾಸರಿಂದ ಅವರ ಆಯುಷ್ಯದಲ್ಲಿ 40 ವರ್ಷಗಳು ದಾನಮಾಡಿಸಿರುತ್ತಾರೆ! ಪೂರ್ಣಾರೋಗ್ಯ ಪಡೆದು ಶ್ರೀ ಜಗನ್ನಾಥದಾಸರು, ವೇದ, ವೇದಾಂತ ಸಚ್ಛಾಸ್ತ್ರ ಸಾರವೆನಿಸುವ

"ಶ್ರೀ ಹರಿಕಥಾಮೃತಸಾರವನ್ನು" ತಿಳಿಗನ್ನಡದಲ್ಲಿ ರಚಿಸಿ
ಮಾಧ್ವರಿಗೆ ಮರೆಯಲಾಗದ ಮಹದುಪಕಾರವನ್ನು ಮಾಡಿರುತ್ತಾರೆ!

ಜಗನ್ನಾಥದಾಸರು ಮಂತ್ರಾಲಯಕ್ಕೆ ಬಂದು ಶ್ರೀ ಗುರುರಾಜರ ಬೃಂದಾವನದ ಮುಂದೆ ನಿಂತು ರಾಯರೊಡನೆ ಮಾತಾಡುತ್ತಿದ್ದ ಭಾಗ್ಯಶಾಲಿಗಳು! ಬೃಂದಾವನದಿಂದ ರಾಯರು ಪ್ರತಿದಿವಸ ದಾಸರೊಡನೆ ಮಾತಾಡುವುದು ಪದ್ಧತಿಯಾಯಿತು ಈ ವಿಷಯವು ಕೆಲವರಿಗೆ ತಿಳಿದು ಬಂದು ಪರೀಕ್ಷಿಸಬೇಕೆಂದು, ದಾಸರಿಗೆ ಕಾಣದಂತೆ ಬೃಂದಾವನದ ಹಿಂಭಾಗದಲ್ಲಿ ನಿಂತರು. ಆದಿನ ಸರ್ವಜ್ಞರಾದ ಗುರುರಾಜರು ಮಾತಾಡಲಿಲ್ಲ. ಮತ್ತೆ ಮತ್ತೆ, ಕರೆದು, ಕೂಗಿ, ಚಿಂತಿಸಿದರು ದಾಸರಾಯರು. ವಿಷಯವು ತಿಳಿಯಲಿಲ್ಲ. ಆಗ

ಯಾಕೆ ಮೂಕನಾದ್ಯೋ! ಗುರು।
ನೀನ್ಯಾಕೆ ಮೂಕನಾದ್ಯೋ।

ಎಂಬುದಾಗಿ ಪದವನ್ನು ಹಾಡಿ ಬೇಸರದಿಂದ ಹೊರಟುಹೋದರು. ಆದಿನ ರಾತ್ರಿ ಸ್ವಪ್ನದಲ್ಲಿ ದಾಸರಿಗೆ ರಾಯರು ದರ್ಶನವಿತ್ತು ಮೌನಕ್ಕೆ ಕಾರಣವನ್ನು ತಿಳಿಸಿ,ಅಂದಿನಿಂದ ಮಾಮೂಲಿನಂತೆ ಮಾತಾಡುವುದಿಲ್ಲವೆಂದು, ನೆನಿಸಿದಾಗ ಸ್ವಪ್ನದಲ್ಲಿ ಕಂಡು ಮಾತಾಡುವುದಾಗಿ ಅಪ್ಪಣೆಯಿತ್ತರು!

ಮಹಾತ್ಮರ ಮಾತಿನಲ್ಲಿ ಮಹಾರ್ಥವಿದೆ! ಮೌನದಲ್ಲಿಯೂ ಅರ್ಥವಿದೆ! ಸಾಮಾನ್ಯರಿಗೆ ತಿಳಿಯಲಾದೀತೇ!

# ಸರ್ ಥಾಮಸ್ ಮನ್ರೊ

ಸರ್ಕಾರದವರು ದೇವಾಲಯ, ಮಠಗಳಿಗಿದ್ದ ಇನಾಮುಗಳನ್ನು ರದ್ದುಪಡಿಸಿ ಸ್ವಾಧೀನಮಾಡಿಕೊಳ್ಳುವ ಕ್ರಮವನ್ನು ಕೈಗೊಂಡಿದ್ದರು. **ಈಸ್ಟಿಂಡಿಯಾ ಕಂಪೆನಿಯ** ಪರವಾಗಿ 'ಸರ್ ಥಾಮಸ್ ಮನ್ರೊ' ವಿಚಾರಣಾಧಿಕಾರಿಯಾಗಿ ನಿಯಮಿಸಲ್ಪಟ್ಟನು. ವಿಚಾರಣೆಗೆ ಮಂತ್ರಾಲಯಕ್ಕೆ ಬಂದು 'ಮೊಕ್ಕಾಂ' ಮಾಡಿದನು.

ಮನ್ರೊ ರಾಯರ ಮಠಕ್ಕೆ ಬಂದನು. ಮಠಾಧಿಕಾರಿಗಳೊಡನೆ ವಿಷಯವನ್ನು ಚರ್ಚಿಸುತ್ತಿರಲು ಶ್ರೀ ಗುರುರಾಜರ ಬೃಂದಾವನದಿಂದ ಸನ್ಯಾಸಿಯು ನಡೆದು ಬಂದು ಮನ್ರೊಜತೆ ಮಾತುಕತೆನಡೆಸಿ, ಅವನಿಗೆ ಸಂಶಯ ನಿವಾರಣೆ ಮಾಡಿ, ಮಂತ್ರಾಕ್ಷತೆಗಳನ್ನಿತ್ತು ಆಶೀರ್ವಾದವಮಾಡಿ ಹಿಂತಿರುಗಿಹೋಗಿ ಬೃಂದಾವನದಲ್ಲಿ ಸೇರಿದುದು ಮನ್ರೊಗೆ ಮಾತ್ರ ಕಂಡಿತು ! ಮಾತುಕೇಳಿಸಿತು ! ಪಕ್ಕದಲ್ಲೆ ನಿಂತಿದ್ದ ಮಠಾಧಿಕಾರಿಗಳಿಗೆ ಒಂದೂ ತಿಳಿಯಲಿಲ್ಲ. ಅವರನ್ನು ವಿಚಾರಿಸಲು ತಮಗೇನೂ ತಿಳಿಯದೆಂದರು. ಆದರೆ ಮನ್ರೊ ಕೈಯಲ್ಲಿ ಗುರುರಾಜರಿತ್ತ ಮಂತ್ರಾಕ್ಷತೆಯನ್ನು ಕಂಡು ಬೆರಗಾದರು. ಮನ್ರೊ ದೊರೆಯ ಸುಕೃತವನ್ನು ಕುರಿತು ಕೊಂಡಾಡಿದರು ! ಮನ್ರೊ ಅಲ್ಲಿಂದ ಮೊಕ್ಕಾಂಗೆ ಹಿಂತಿರುಗಿ ಬಂದು ಮಠದ ಇನಾಮುಗಳನ್ನು ರದ್ದುಗೊಳಿಸದೆ ಮಠಕ್ಕೆ 'ಖಾಯಂ' ಮಾಡಿದನು. ಶ್ರೀಗಳವರಿತ್ತ ಮಂತ್ರಾಕ್ಷತೆಯನ್ನು ತನ್ನ ಅಡುಗೆಯಲ್ಲಿ ಬಳಸಲು ಹೇಳಿದನು. ವಿದೇಶೀಯನೂ, ವಿಧರ್ಮೀಯನೂ ಆದ ಮನ್ರೊಗೆ ಶ್ರೀ ರಾಯರ ಅನುಗ್ರಹವಾಯಿತು ! ಗುರುರಾಜರಿಗೆ, ಜಾತಿಮತಗಳ ವೈಷಮ್ಯವಿಲ್ಲ. ಅಪ್ಪಣಾಚಾರ್ಯರು ಅಪ್ಪಣೆ ಕೊಟ್ಟಂತೆ ನಿರ್ಮಲವಾದ ಭಕ್ತಿಗೆ ಮಾತ್ರ ಪ್ರಸನ್ನರಾಗುವರು. ಅದಕ್ಕೆ ಮನ್ರೊ ಒಬ್ಬ ನಿದರ್ಶನವಲ್ಲವೆ ?

ಸರ್ ಥಾಮಸ್ ಮನ್ರೊಗೆ ಶ್ರೀ ರಾಯರು ದರ್ಶನವಿತ್ತು ಅನುಗ್ರಹಿಸಿದುದು ಮದ್ರಾಸ್ ಡಿಸ್ಟ್ರಿಕ್ಟ್‌ಗೆಜೆಟ್–ಬಳ್ಳಾರಿಯಲ್ಲಿ ಪ್ರಕಟಿಸಲಾಗಿದೆ. ಆಗ್ಗೆ ಹಾಗು 1953ರ ವರೆಗೂ ಮಂತ್ರಾಲಯ ಬಳ್ಳಾರಿ ಜಿಲ್ಲಾಕ್ಕೆ ಸಂಬಂಧಪಟ್ಟಿತ್ತು. ಈಗ ಆಂಧ್ರಪ್ರದೇಶದಲ್ಲಿ ಕರ್ನೂಲು ಜಿಲ್ಲಾದಲ್ಲಿದೆ ! ಗೆಜೆಟಿನಲ್ಲಿ ಪ್ರಕಟಿಸಿದ ವಿಷಯದ ನಕಲು ಕೆಳಗೆ ನಮೂದಿಸಲಾಗಿದೆ !

EXTRACT FROM:

# "MADRAS DISTRICT GAZETTEERS"

BY W. FRANCIS, Esq., I. C. S.

## Volume No. I, Bellary

Reprint 1916 by the Superintendent, Govt. Press, Madras.
CHAPTER XV – ADONI TALUK – PAGE No. 213.

Manchala (Mantralaya):- A Shortriem village with a population of 1212 on the bank of the Tungabhadra is in the extreme northof the Taluk. The Village is videly known, as containing the tomb of the Madhva saint Sri Raghavendra Swami. The annual festival in August connected with which is attended by large numbers of pilgrims, including even Lingayats, from Bombay, the Nijam's Dominions and even Mysore. The tomb itself is not of architectural interest. The grant of the landed endowment attached to it, is said in one of the Mackenzich MSS to have been made by Venkanna Pant, the well-known Dewan of Sidi Masaud Khan, Governor of Adoni from 1662 to 1687.

A quaint story of Sir Thomas Munro is told about the place. The endowment being threatened with resumption, Munro, it is said, came to make enquiries. After removing his boots and taking off his hat he approached the grave. The saint thereupon emerged from his tomb and met him. They conversed together for some time regarding the resumption, but though the saint was visible and audible to Munro-who was himself the people declare, semi-divine none of the others who were there, could either see him or hear what he said. The discussion ended. Munro returned to his tent and quashed the proposal to resume the endowment. Being offered some consecrated rice, he accepted it and ordered it to be used in the preparation of his meals for that day.

—Madras Review VII 280

ಮನ್ರೊದೊರೆಬಂದು ನೀನು ಬೃಂದಾವನದಲಿ
ನಿಂತು ಮಾತಾಡೆ–ಚರ್ಚಿಸಿ ಪ್ರಣತಿಗೈದ !
ರದ್ದುಗೊಳಿಸದೆ ಮಾನ್ಯಗಳ್ ರಕ್ಷಿಸಿದನು.
ಪ್ರಬಲ ನಿಮ್ಮ ತಪಶ್ಶಕ್ತಿ ! ರಾಘವೇಂದ್ರ !

# ಶ್ರೀ ಸುಯಮೀಂದ್ರರು - ರಜತರಥ

ಶ್ರೀ ರಾಘವೇಂದ್ರರು ಬೃಂದಾವನ ಪ್ರವೇಶಮಾಡಿ ಇಂದಿಗೆ ಮುನ್ನೂರು ವರ್ಷಗಳು. ಅದು ಗುರುರಾಜರ ಬೃಹತ್ಪೀಠವನ್ನಲಂಕರಿಸಿದ ಯತಿಚಂದ್ರವು ರಾದ ಶ್ರೀ ಸುಯಮೀಂದ್ರರಕಾಲ. ಶ್ರೀ ರಾಯರ ಉಭಯ ವಂಶಾಬ್ಧಿ ಚಂದ್ರಮರಾದ ಶ್ರೀನಿವಾಸಾಚಾರ್ಯರು ತುರ್ಯಾಶ್ರಮವನ್ನು ಸ್ವೀಕರಿಸಿ ಶ್ರೀ ಸುಯಮೀಂದ್ರತೀರ್ಥರಾಗಿ ರಾರಾಜಿಸಿದರು.

ಶ್ರೀ ಸುಯಮೀಂದ್ರರಿಗೆ ಶ್ರೀ ಗುರುಸಾರ್ವಭೌಮರಲ್ಲಿ ಅಪಾರವಾದ ಭಕ್ತಿವಿಶ್ವಾಸಗಳು. ಶ್ರೀ ಮಂತ್ರಾಲಯಕ್ಕೆ ಬರುತ್ತಿದ್ದ ಭಕ್ತಜನರಿಗೆ ಶ್ರೀಗಳು, ರಾಯರ ಮಹಿಮೆಯನ್ನು ವರ್ಣಿಸುವುದರಲ್ಲಿ ಹೆಚ್ಚು ಆಸಕ್ತಿ ಉಳ್ಳವರಾಗಿದ್ದರು. ದ್ವೈತವೇದಾಂತ ಸಾಮ್ರಾಜ್ಯವನ್ನು ಸುದೀರ್ಘಕಾಲ (33 ವರ್ಷಗಳು) ಪಾಲಿಸಿದ ತಪೋಧನರು. ವಿದ್ವಜ್ಜನಪಕ್ಷಪಾತಿಗಳು. ದಯಾಸಮುದ್ರರು. ಶ್ರೀ ರಾಯರ ಪೂರ್ಣಾನುಗ್ರಹಕ್ಕೆ ಪಾತ್ರರಾದ ಸುಕೃತಿಗಳು, ಗುರುರಾಜರಿಗೆ ಶಾಶ್ವತವಾದ ಸೇವೆಯೊಂದನ್ನು ನಡೆಸಬೇಕೆಂದು ಸಂಕಲ್ಪಿಸಿದರು.

ಮದ್ರಾಸ್ ಪ್ರಾಂತದ ರಾಮನಾಡ್ ಜಿಲ್ಲೆಗೆ ಸೇರಿದ ಕೊಟ್ಟೆಯೂರು ನಿವಾಸಿಯಾದ ರಾಮನಾಥಚೆಟ್ಟಿಯಾರು ಕೋಟ್ಯಾಧೀಶನು. ಆಗರ್ಭ ಶ್ರೀಮಂತನಿಗೆ ಆರೋಗ್ಯಭಾಗ್ಯವಿಲ್ಲ. ಹೊಟ್ಟೆಯಲ್ಲಿ ಹುಣ್ಣಾಯಿತು. ನಿಪುಣರಾದ ವೈದ್ಯರು ಚಿಕಿತ್ಸೆನಡೆಸಿದರು, ವ್ಯಾಧಿಯು ಗುಣಮುಖವಾಗಲಿಲ್ಲ. ಶಸ್ತ್ರಚಿಕಿತ್ಸೆ ಅಗತ್ಯವೆನಿಸಿತು. ಆದರೆ ವೈದ್ಯರಿಗೆ ಧೈರ್ಯವು ಸಾಲದಾಯಿತು. ವಿಷಯವನ್ನು ಚೆಟ್ಟಿಯಾರನಿಗೆ ತಿಳಿಸಿದರು. ಮಾಡುವುದೇನಿದೆ! ತನಗೆ ಕೊನೆಯದಿನಗಳು ಸಮೀಪಿಸಿದವೆಂದು ಚೆಟ್ಟಿಯಾರನು ನಿರ್ಧಾರಮಾಡಿಕೊಂಡನು. ಅಂತಹ ಸಂಕಟದ ಸಮಯದಲ್ಲಿ ಶ್ರೀ ರಾಯರ ಭಕ್ತರೊಬ್ಬರ ಪರಿಚಯವಾಯಿತು, ರಾಯರ ಮಹಿಮೆಯನ್ನು ತಿಳಿಸಿ, ಅವರ ಚಿತ್ರಪಟವನ್ನು ಕೊಟ್ಟು ಪೂಜಾ ಕ್ರಮವನ್ನು ತಿಳಿಸಿದರು.

ಮಾನವ ಪ್ರಯತ್ನಗಳು ಮುಗಿದನಂತರ ದೇವರ ಮೇಲೆ ಭಾರಹಾಕುವುದು ಮಾನವ ಸ್ವಭಾವವಷ್ಟೆ ! ಚೆಟ್ಟಿಯಾರನು, ಶ್ರದ್ಧಾಭಕ್ತಿಗಳಿಂದ ಗುರುರಾಜರ ಪೂಜೆ, ಸೇವೆಯನ್ನು ಮಾಡಿದನು. ಪರಿಪಕ್ವಕಾಲ ಬಂದಿರಬೇಕು ! ಗುರುರಾಜರು ಪ್ರಸನ್ನರಾದರು. ಚೆಟ್ಟಿಯಾರರಿಗೆ ಸ್ವಪ್ನದಲ್ಲಿ ದರ್ಶನವಿತ್ತು ಶಸ್ತ್ರಚಿಕಿತ್ಸೆಗೆ ಸಿದ್ಧರಾಗಲು ಅಪ್ಪಣೆ ಇತ್ತರು. ಸ್ವಪ್ನವೃತ್ತಾಂತವನ್ನು ತನ್ನ ಸತಿಗೆ, ಶ್ರೀ ರಾಯರ ಭಕ್ತರಿಗೆ ತಿಳಿಸಿ ಗುರುಕೃಪೆಗೆ ಪಾತ್ರನಾದೆನೆಂದು ಸಂತಸಪಟ್ಟನು. ಅನಂತರ ಶಸ್ತ್ರವೈದ್ಯರನ್ನು ಕಂಡು ಶಸ್ತ್ರಚಿಕಿತ್ಸೆಗೆ ತಾನು ಸಿದ್ಧನಿರುವುದಾಗಿ ತಿಳಿಸಿದನು. ಚಿಕಿತ್ಸೆ ನಡೆಯಿತು. ಜಯಪ್ರದವಾಯಿತು. ವೈದ್ಯರಿಗೆ ಆಶ್ಚರ್ಯಉಂಟಾಯಿತು. **ಚೆಟ್ಟಿಯಾರನನ್ನಭಿನಂದಿಸಿ, ಮಾನವಾತೀತವಾದ ದೈವಿಕ ಶಕ್ತಿಯೇ ಕಾಪಾಡಿತು !** ಎಂಬುದಾಗಿ ಹೇಳಿದರು. ಹೀಗೆ ಶಸ್ತ್ರಚಿಕಿತ್ಸೆ **ಹದಿಮೂರು** ಸಲ ಜಯಪ್ರದವಾಗಿ ನಡೆಯಿತು. ವ್ಯಾಧಿಯು ಪೂರ್ಣಗುಣ ವಾಯಿತು.

ಐಶ್ವರ್ಯವಂತನಾದ ಚೆಟ್ಟಿಯಾರನು ಆರೋಗ್ಯವನ್ನು ಪಡೆದು ಸತೀ ಸಮೇತನಾಗಿ ಶ್ರೀ ಮಂತ್ರಾಲಯಕ್ಕೆ ಬಂದು ವೈಭವದಿಂದ ಶ್ರೀ ರಾಯರ ಸೇವೆಯನ್ನು ಮಾಡಿ, ಪೀಠಸ್ಥರಾದ ಶ್ರೀ ಸುಯಮೀಂದ್ರರನ್ನು ಕಂಡು, ರಾಯರಿಗೆ ಶಾಶ್ವತವಾದ ಸೇವೆಯನ್ನು ನಡೆಸುವ ಸಂಕಲ್ಪವಿರುವುದಾಗಿ ವಿಜ್ಞಾಪಿಸಿದನು. ಅದೇ ಆಲೋಚನೆಯಲ್ಲಿದ್ದ ಶ್ರೀ ಸುಯಮೀಂದ್ರರು ತಮ್ಮ ಮನಸ್ಸಿನಲ್ಲಿದ್ದ, **ರಾಯರಿಗೆ ಬೆಳ್ಳಿಯ ತೇರು** ಮಾಡಿಸಬೇಕೆಂಬುದನ್ನು ತಿಳಿಸಿದರು. ಚೆಟ್ಟಿಯಾರನು ಅದಕ್ಕೆ ಸಂತಸದಿಂದ ಸಮ್ಮತಿಯನ್ನು ವ್ಯಕ್ತಪಡಿಸಿದನು. ಕೋಟ್ಯಾಧೀಶನು ಮನಸ್ಸುಮಾಡಿದರೆ ಯಾವುದು ತಾನೆ ಸಾಧ್ಯವಾಗಲಿಕ್ಕಿಲ್ಲ ! ಶ್ರೀಗಳಿಗೆ ಪ್ರಣಾಮಮಾಡಿ ಫಲಮಂತ್ರಾಕ್ಷತೆಗಳನ್ನು ಪಡೆದು, ಸ್ವಗ್ರಾಮಕ್ಕೆ ಹಿಂತಿರುಗಿದನು.

ಚೆಟ್ಟಿಯಾರನು ಮನೆಗೆ ಬಂದು ವ್ಯಾಪಾರದಲ್ಲಿ ಮಗ್ನನಾಗಿ ರಾಯರಿಗೆ ರಜತರಥದ ವಿಷಯವನ್ನು ಮರೆತನು. ಹೆಂಡತಿಯು ಜ್ಞಾಪಕಮಾಡಿದಳು.

ಆಗಲಿ ಮಾಡಿಸೋಣವೆಂದನು. ಹೀಗಿರಲು ಚೆಟ್ಟಿಯಾರನಿಗೆ ಬರಬೇಕಾದ ಲಕ್ಷಾಂತರ ರೂಪಾಯಿಗಳು ಮಲಯಾ ದೇಶದಿಂದ ಬಾರದೇ ಕೈಬಿಟ್ಟು ಹೋಯಿತು! ಶ್ರೀಮಂತನಿಗೆ ಚಿಂತೆಯಾಯಿತು. ಕೈಬಿಟ್ಟುಹೋದ ಹಣವು ಮತ್ತೆ ಲಭ್ಯವಾದರೆ ರಾಯರಿಗೆ ಬೆಳ್ಳಿಯ ತೇರು ಮಾಡಿಸುವೆನೆಂಬುದಾಗಿ ಶ್ರೀಮತಿಗೆ ತಿಳಿಸಿದನು. ಅದು ಸರಿಯಲ್ಲ ಕೈಬಿಟ್ಟುಹೋದ ಧನಕ್ಕೂ ಬೆಳ್ಳಿಯ ತೇರಿಗೂ ಸಂಬಂಧವಿಲ್ಲ. ತೇರುಮಾಡಿಸುವುದಾಗಿ ಶ್ರೀಗಳಿಗೆ ಮಾತುಕೊಟ್ಟಿದೆ ಅದು ನಡೆಯಲಿ ಎಂದಳು. ಶ್ರೀ ರಾಘವೇಂದ್ರರು ಮಹಾತ್ಮರಾದರೆ ನನ್ನ ಹಣ ನನಗೆ ಸಿಗುವಂತೆ ಮಾಡಲಿ ಆಮೇಲೆ ತೇರಿನ ವಿಷಯವೆಂದು ಹೆಂಡತಿಗೆ ತಿಳಿಸುತ್ತಾನೆ ಚೆಟ್ಟಿಯಾರನು. ಅದೇ ರಾತ್ರಿ ಸ್ವಪ್ನದಲ್ಲಿ ರಾಯರು ದರ್ಶನ ವಿತ್ತು '**ಚೆಟ್ಟಿಯಾರ್ ಚಿಂತಿಸಬೇಡ! ಮಲಯಾದಲ್ಲಿ ಕೈತಪ್ಪಿಹೋದ ನಿನ್ನಹಣ ನಿನ್ನಗೆತಪ್ಪದೆ ಲಭಿಸುತ್ತದೆ**'ಎಂಬುದಾಗಿ ಅನುಗ್ರಹಮಾಡಿದರು.

ಚೆಟ್ಟಿಯಾರನಿಗೆ ಮಲಯಾದಲ್ಲಿ ಕೈತಪ್ಪಿಹೋದ ಲಕ್ಷಾಂತರ ರೂಪಾಯಿಗಳು ಸುರಕ್ಷಿತವಾಗಿ ಸ್ವಾಧೀನವಾಯಿತು. ರಾಯರ ಮಹಿಮೆಯನ್ನು ಕೊಂಡಾಡಿದನು. ಕುಟುಂಬಸಮೇತ ಮಂತ್ರಾಲಯಕ್ಕೆ **ರಜತರಥವನ್ನು** ಸಿದ್ಧಪಡಿಸಿಕೊಂಡು ಬಂದು ಪೀಠಸ್ಥರಾದ ಶ್ರೀ ಸುಯಮೀಂದ್ರತೀರ್ಥರಿಗೆ ಒಪ್ಪಿಸಿ, ರಾಯರ ಸೇವೆಯನ್ನು ಮಹಾವೈಭವದಿಂದ ಮಾಡಿದನು. ಸಹಸ್ರಾರು ಬ್ರಾಹ್ಮಣರಿಗೆ ವೃಷ್ಟಾನ್ನ ಭೋಜನ - ವಿಶೇಷವಾಗಿ ದಕ್ಷಿಣೆಕೊಟ್ಟು ತೃಪ್ತಿ ಪಡಿಸಿದನು. ಸುಖಪ್ರಾರಬ್ಧದ ಯತಿಚಂದ್ರಮರಿಗೆ **ರಜತರಥೋತ್ಸವವಾಯಿತು!** ರಾಯರ ದಯೆಯಿಂದ ರಾಮನಾಥ ಚೆಟ್ಟಿಯಾರನು ಬದುಕಿದನು. ಕೋಟ್ಯಾಧೀಶನಿಂದ ರಾಯರು ಚಿಕ್ಕ ಸೇವೆಯನ್ನು ಸ್ವೀಕರಿಸಿದರು. ಶ್ರೀ ಸುಯಮೀಂದ್ರರಿಗೆ ತಮ್ಮ ಸಂಕಲ್ಪವು ನೆರವೇರಿದುದಕ್ಕೆ ಸಂತುಷ್ಟರಾದರು. ರಾಯರ ಮಹಿಮೆಯನ್ನು ಕೊಂಡಾಡಿದರು. ಇದು 1944 - 45ರಲ್ಲಿ ಜರುಗಿದ ಘಟನೆ!

ವ್ಯಾಧಿ ಪೀಡಿತನಾದ ಲಕ್ಷಾಧಿಕಾರಿ
ಆಯುರಾರೋಗ್ಯ ಭೋಗಭಾಗ್ಯಗಳ ಪಡೆದ

ತಮ್ಮ ಸೇವೆಯ ಮಹಿಮೆಯಿಂ - ಧನ್ಯನಾಗಿ
ರಜತರಥವಿತ್ತ - ನಾಭಕ್ತ-ರಾಘವೇಂದ್ರ !

ಛತ್ರಚಾಮರ ಗಂಧಪುಷ್ಪಗಳ ಪಡೆದು
ರಜತರಥದಲಿ ರಾಜದರ್ಬಾರು ಪಡೆದು
ವಿಪ್ರತತಿಯಿಂದ - ಮೇಲ್‌ಸೇವೆ ವಿನುತಿ ಪಡೆದು
ರಾಜಿಪ ಮುನೀಂದ್ರ ! ಪ್ರಭುಚಂದ್ರ ! ರಾಘವೇಂದ್ರ !

## ದ್ವಿಗುಣೀಕೃತವಾದ ಫಲ

ಸಾಧಾರಣವಾಗಿ ಮಾನವನು ಅಪೇಕ್ಷಿಸಿದ ವರಗಳನ್ನು ದೇವತೆಗಳು ಕೊಡುವುದು ಸಾಂಪ್ರದಾಯವಾಗಿದೆ. ಕಾಮಧೇನು, ಕಲ್ಪವೃಕ್ಷಗಳು ಸಹ ಅಪೇಕ್ಷಿಸಿದುದನ್ನು ಕೊಡುವುದು ನಡೆದಿದೆ. ಆದರೆ ಶ್ರೀ ಗುರುಸಾರ್ವಭೌಮರು ತಮ್ಮನ್ನಾಶ್ರಯಿಸಿದ ಭಕ್ತಜನರ ಬಯಕೆಗಳನ್ನು ಅಪೇಕ್ಷಿಸಿದುದಕ್ಕೆ ದ್ವಿಗುಣೀಕೃತವಾಗಿ ಕೊಡುವರೆಂಬುದನ್ನು ಪೀಠಸ್ಥರಾಗಿದ್ದ ಶ್ರೀ ಸುಯಮೀಂದ್ರತೀರ್ಥ ಶ್ರೀಪಾದಂಗಳವರು ತಾವು ಆಶ್ರಮ ಪಡೆದನಂತರ 25ನೇ ವರ್ಷದಲ್ಲಿ ಶ್ರೀ ರಾಯರ ರಜತ ರಥೋತ್ಸವದ ಸಮಯದಲ್ಲಿ ತಮ್ಮ ಅನುಗ್ರಹ ಭಾಷಣದಲ್ಲಿ ಅಪ್ಪಣೆಕೊಟ್ಟದ್ದನ್ನು ಅಲ್ಲಿ ನೆರೆದಿದ್ದವರಲ್ಲಿ ನಾವು ಸೇರಿ ಕೇಳಿ ಆನಂದಪಟ್ಟೆವು. ಇದು 1958ರಲ್ಲಿ ನಡೆದಂತೆ ಜ್ಞಾಪಕವಿದೆ.

ಶ್ರೀ ಗುರುಸಾರ್ವಭೌಮರಿಗೆ, ಪ್ರಹ್ಲಾದರಾಜರಿಗೆ, ವಸ್ತ್ರಾಭರಣ ಪುಷ್ಪಗಳಿಂದ ಅಲಂಕರಿಸಿ ರಜತರಥದಲ್ಲಿ ಕೂಡಿಸಿದ್ದಾರೆ ! ಛತ್ರಚಾಮರಾದಿ ರಾಜಚಿಹ್ನೆಗಳಿಂದ ಶೋಭಿಸುತ್ತಿದ್ದಾರೆ ! ವಿಪ್ರರಿಂದ ವೇದಘೋಷ ನಡೆದಿದೆ.ಸಹಸ್ರಾರು ಭಕ್ತರು 'ಪ್ರಹ್ಲಾದವರದಗೋವಿಂದಾ' ಜೈ ಪರಿಮಳಾಚಾರ್ಯ – ಜೈ ಗುರುಸಾರ್ವಭೌಮ ! 'ರಾಜಾಧಿರಾಜ ಗುರುಸಾರ್ವಭೌಮ ಗೋವಿಂದಾ' ಎಂಬುದಾಗಿ ಏಕಕಂಠದಿಂದ ಭಕ್ತರು ಹರಿಗುರುನಾಮ

ಸಂಕೀರ್ತನ ಮಾಡುತ್ತಿದ್ದಾರೆ ! ರಜತರಥವು ವಿದ್ಯುದ್ದೀಪಗಳಿಂದಲಂಕೃತ ವಾಗಿದೆ ! ಶ್ರೀ ರಾಯರು ರಜತರಥಾರೂಢರಾಗಿ ಬರುತ್ತಿದ್ದಾರೆ ! ಆಗ ಶ್ರೀ ಸುಯಮೀಂದ್ರರು ಅಶೇಷಭಕ್ತಜನರನ್ನುದ್ದೇಶಿಸಿ - "ಶ್ರೀ ಗುರು ಸಾರ್ವ ಭೌಮರು, ಅಪೇಕ್ಷಿತಪ್ರದಾತರಷ್ಟೆ ಅಲ್ಲ. ನಾವು ಕೇಳಿದ್ದಕ್ಕೆ ಎರಡ ರಷ್ಟು ಕೊಡುತ್ತಾರೆ ! ಇದಕ್ಕೆ ನಮ್ಮದೇ ಒಂದು ದೃಷ್ಟಾಂತ ! ನಾವು ಆಶ್ರಮ ತೆಗೆದುಕೊಳ್ಳುವ ಸಮಯದಲ್ಲಿ ಮಹಾಪೀಠದಲ್ಲಿ ನಮ್ಮನ್ನು 12ವರ್ಷಗಳಕಾಲ ಕಾಪಾಡಿಕೊಂಡು ಬರಬೇಕೆಂದು ಪ್ರಾರ್ಥಿಸಿದೆವು ! ಈಗ 24 ವರ್ಷಗಳು ತುಂಬಿದವು. 25ನೇ ಆರಾಧನೋತ್ಸವದಲ್ಲಿದ್ದೇವೆ ! ಬೃಹತ್ಪೀಠದಲ್ಲಿ ನಮ್ಮನ್ನು 24 ವರ್ಷ ಗಳು ರಕ್ಷಸಿಕೊಂಡು ಬಂದರು: ಅವರ ಮಹಾಮಹಿಮೆ ಏನೆಂದು ವರ್ಣಿಸೋಣ ! ಈಗ ನಮ್ಮದೇ ಆದ ದೃಷ್ಟಾಂತದಿಂದ ಶ್ರೀ ಗುರು ಸಾರ್ವಭೌಮರು, ದ್ವಿಗುಣೀಕೃತವಾದ ಫಲವನ್ನನುಗ್ರಹಿಸುತ್ತಾರೆ ಎಂಬುದು ಸಿದ್ಧವಾಯಿತು ! "

ಎಂಬುದಾಗಿ ಅಪ್ಪಣೆಕೊಟ್ಟು ಅಶೇಷ ಭಕ್ತಜನರಿಂದ ವಿಶೇಷಮಾನ್ಯ ರಾದರು ಶ್ರೀ ಸುಯಮೀಂದ್ರರು.

## ಉಭಯವಂಶಾಬ್ಧಿ ಚಂದ್ರಮರು

ವೀಣಾಮನೆತನದ ಪಂಡಿತರಾದ ಶ್ರೀ ವೀಣಾವೆಂಕಣ್ಣ (ಶ್ರೀ ರಾಘವೇಂದ್ರಸ್ವಾಮಿಗಳ) ನ ಪವಿತ್ರವಂಶದಲ್ಲಿ ಜನಿಸಿದರು ಶ್ರೀ ಶ್ರೀನಿವಾಸಾಚಾರ್ಯರು. ಮಠದ ದಿವಾನರಾಗಿ ದಕ್ಷತೆಯಿಂದ ಕಾರ್ಯನಿರ್ವಹಣೆ ಮಾಡಿದರು. ನಲವತ್ತು ತುಂಬದ ಪ್ರಾಯದಲ್ಲಿ ಸನ್ಯಾಸವನ್ನು ಸ್ವೀಕರಿಸಿ ಶ್ರೀ ಸುಯಮೀಂದ್ರರೆಂಬ ಅಭಿದಾನದಿಂದ ದ್ವೈತವೇದಾಂತ ಸಾಮ್ರಾಜ್ಯ ವನ್ನು 33 ವರ್ಷಗಳ ಕಾಲ ಪಾಲಿಸಿದರು. ಸಾಮಾನ್ಯವಾಗಿ ಶ್ರೀ ರಾಯರ ಪೀಠದಲ್ಲಿ ಬಂದ ಯತಿಚಂದ್ರಮರಿಗೆ ಮಂತ್ರಾಲಯದಲ್ಲೇ ಬೃಂದಾವನಸ್ಥರಾಗ

ಬೇಕೆಂಬ ಆಶೆ ಸ್ವಾಭಾವಿಕವಾದದ್ದು, ಆದರೆ ಅದು ದುರ್ಲಭ. **ಶ್ರೀ ಸುಶೀಲೇಂದ್ರ ಶ್ರೀಪಾದಂಗಳವರು** ಮಂತ್ರಾಲಯಕ್ಕೆ ಬೃಂದಾವನಸ್ಥರಾಗಲಿಕ್ಕೆ ಬರುತ್ತಿರಲು, ಮಾರ್ಗದಲ್ಲಿ ಸ್ವಪ್ನವಾಗಿ, ಬೇಡ – ರಿತ್ತಿಯಲ್ಲಿ ನೆಲಸಬೇಕು ! ನಾವು ಅಲ್ಲಿಯೇ ಅನುಗ್ರಹಮಾಡುವೆವೆಂದು ರಾಯರು ಸೂಚಿಸಿದರಂತೆ !

ವಿಧಿವಿಲಾಸವು ವಿಚಿತ್ರವಾದದ್ದು, ನಾವುಬಯಸುವುದೊಂದು, ಜರುಗುವುದು ಮತ್ತೊಂದು, ಶ್ರೀ ಸುಯಮೀಂದ್ರತೀರ್ಥರು 25ವರ್ಷಗಳು ಮಂತ್ರಾಲಯದಲ್ಲಿಯೇ ಇದ್ದು ಕಾರಣಾಂತರದಿಂದ ಮಠದ ಮೂಲಸ್ಥಾನವಾದ **ನಂಜನಗೂಡಿ**ನಲ್ಲಿ ವಾಸಮಾಡಿದರು. ಏಳೆಂಟು ವರ್ಷಗಳ ನಂತರ ಬೆಂಗಳೂರಿಗೆ ಬಂದರು. ಅಸ್ವಸ್ಥತೆ ಹೆಚ್ಚಾಯಿತು. ಚಿಕಿತ್ಸೆನಡೆಯಿತು ! ತಾವು ಶ್ರೀ ಮಂತ್ರಾಲಯದಲ್ಲಿಯೇ ಬೃಂದಾವನಸ್ಥರಾಗಬೇಕಾಗಿ ಅಪೇಕ್ಷಿಸುವುದನ್ನು ವೈದ್ಯರಿಗೆ ತಿಳಿಸಿ, ಕೂಡಲ್ಲೆ ಪ್ರಯಾಣವಾಗಿ ಶ್ರೀ ಮಂತ್ರಾಲಯವನ್ನು ಸೇರಿದರು. ಪಾರ್ಥಿವಶರೀರವನ್ನು ತ್ಯಜಿಸಿದರು. ತಮ್ಮ ಗುರುಗಳಾದ **ಶ್ರೀ ಸುವ್ರತೀಂದ್ರತೀರ್ಥರ** ವೃಂದಾವನದ ಬಲಭಾಗದಲ್ಲಿ ಬೃಂದಾವನಸ್ಥರಾಗಿದ್ದಾರೆ ! ಮಹಾಕ್ಷೇತ್ರವಾದ ಮಂತ್ರಾಲಯದಲ್ಲಿ ಬೃಂದಾವನಸ್ಥರಾಗುವ ಸುಯೋಗವು ಕೆಲವರಿಗೆ ಮಾತ್ರ ಸಾಧ್ಯ ಅದು ಶ್ರೀ ಗುರುಸಾರ್ವಭೌಮರ ಪೂರ್ಣಾನುಗ್ರಹಕ್ಕೆ ಪಾತ್ರರಾದ ಸುಕೃತಿಗಳಾಗಿರಬೇಕು ! ಅಂಥ ಸುಕೃತಿಗಳಲ್ಲಿ **ಶ್ರೀ ಸುಯಮೀಂದ್ರರು** ಒಬ್ಬರೆಂಬುದನ್ನು ನಾವು ಗಮನಿಸಬೇಕು ! ಶ್ರೀ ಸುಯಮೀಂದ್ರರು 1963ರಲ್ಲಿ ತಮಗೆ ದೇಹಾಲಸ್ಯವಾದಾಗ ತಮ್ಮ ಸೋದರರಾದ **ಶ್ರೀ ವೇಂಕಟರಾಘವೇಂದ್ರಾಚಾರ್ಯರಿಗೆ** ಆಶ್ರಮವಿತ್ತು **ಸುಜಯೀಂದ್ರರೆಂಬ** ಅಭಿದಾನವನ್ನಿತ್ತರು.

## ಶ್ರೀ ಸುಜಯೀಂದ್ರರು

ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಮಹಾಪೀಠವನ್ನಲಂಕರಿಸಿ ಪೀಠಸ್ಥರಾದ ಗುರುಗಳು **ಶ್ರೀ ಸುಜಯೀಂದ್ರತೀರ್ಥರು.** ಪೂರ್ವಾಶ್ರಮದ ಹೆಸರು **ವೆಂಕಟರಾಘವೇಂದ್ರಾಚಾರ್ಯರು.** ಆಚಾರ್ಯರು ನ್ಯಾಯವೇದಾಂತ

ಶಾಸ್ತ್ರಗಳಲ್ಲಿ ಅದ್ವಿತೀಯ ಪಂಡಿತರು. ವಿದ್ವಜ್ಜನಪಕ್ಷಪಾತಿಗಳು. ಕರುಣಾ ಸಮುದ್ರರು, ಶ್ರೀ ಗುರುರಾಜರ ಉಭಯವಂಶಾಬ್ಧಿಚಂದ್ರಮರು. ಶಾಂತ ಮೂರ್ತಿ. ಆಶ್ರಮವನ್ನು ತೆಗೆದುಕೊಂಡ ಕೆಲವೇ ದಿನಗಳಲ್ಲಿ ರಾಯರ ದರ್ಶನಕ್ಕೆ ಮಂತ್ರಾಲಯಕ್ಕೆ ಬರುವ ಭಕ್ತಜನರಿಗೆ ಬಹುವಿಧವಾದ ಸೌಕರ್ಯಗಳನ್ನು ಮಾಡಿಸಿ ಶ್ರೀ ರಾಯರ ಪ್ರೀತಿಗೆ ಪಾತ್ರರಾದರು.

(1) ಐದಾರುನೂರು ಬ್ರಾಹ್ಮಣ ಸುವಾಸಿನಿಯರಿಗೆ ಭೋಜನಕ್ಕೆ ಅನುಕೂಲವಾಗಲು, ಬಿಸಿಲು, ಮಳೆಗಳ ತೊಂದರೆಆಗಬಾರದೆಂದು, ರಾಯರ ಮಠದ ಹಿಂಭಾಗದಲ್ಲಿ ಭೋಜನಶಾಲೆಯನ್ನು ನಿರ್ಮಾಣಮಾಡಿಸಿರುತ್ತಾರೆ !

(2) ವಿದ್ವತ್ಸಭಾಭವನವನ್ನು ನಿರ್ಮಿಸಿ, ಕಾಲಕಾಲಕ್ಕೆ ಅಲ್ಲಿ ವಿದ್ವತ್ಸಭೆ ಯನ್ನು ನಡೆಸುತ್ತಾರೆ. ಎರಡು ವರ್ಷಗಳ ಕೆಳಗೆ ಇತರ ಮಠೀಯ ಯತಿಗಳನ್ನಾ ಹ್ವಾನಿಸಿ ಕಲ್ಯಾಣನಗರದಲ್ಲಿ ವೈಭವೋಪೇತವಾಗಿ ವಿದ್ವತ್ಸಭೆಯನ್ನು ನಡೆಸಿ, ಪಂಡಿತ, ಪಾಮರರನ್ನು ತೃಪ್ತಿಗೊಳಿಸಿದರು. ಇದೇವರ್ಷ ಶ್ರೀ ತಿರುಪತಿಯಲ್ಲಿ ವಿಜೃಂಭಣೆಯಿಂದ ವಿದ್ವತ್ಸಭೆಯನ್ನು ನಡೆಸಿ ಪಂಡಿತರನ್ನುಚಿತರೀತಿ ಸತ್ಕರಿಸಿ ವಿದ್ವಜ್ಜನ ಪಕ್ಷಪಾತಿಗಳಾದರು.

(3) ಮಂತ್ರಾಲಯದಲ್ಲಿ ಬಂದ ಭಕ್ತರಿಗೆ ನೀರಿನತೊಂದರೆ ಇದ್ದಿತು. ಭಕ್ತರ ಸೌಕರ್ಯಕ್ಕಾಗಿ ಶ್ರೀ ತುಂಗಭದ್ರಾನದಿಯಿಂದ ಶ್ರೀ ಮಠಕ್ಕೆ ಹಾಗು ಮಠದ ಛತ್ರಕ್ಕೆ ನಲ್ಲಿಯ ವಸತಿ ಏರ್ಪಡಿಸಿ ನೀರಿನ ತೊಂದರೆಯನ್ನು ನಿವಾರಣೆಮಾಡಿ ಅಶೇಷ ಭಕ್ತವೃಂದದಿಂದಭಿನಂದನೀಯರಾಗಿದ್ದಾರೆ ಶ್ರೀ ಸುಜಯೀಂದ್ರರು.

(4) ದೂರದೂರದ ಪ್ರದೇಶದಿಂದ ರಾಯರ ದರ್ಶನಕ್ಕಾಗಿ ಬರುತ್ತಿರುವ ಯಾತ್ರಿಕರಿಗೆ ಮಠದ ಛತ್ರವು ವಸತಿಗೆ ಸಾಲದೆಂದರಿತು ನವೀನಪದ್ಧತಿಗೆ ಅನುಕೂಲವಾಗಿ ಹೆಚ್ಚು ಹೆಚ್ಚಾಗಿ ಕೊಠಡಿಗಳನ್ನು ಕಟ್ಟಿಸಿದ್ದಾರೆ. ಕಟ್ಟಿಸುತ್ತ ಲಿದ್ದಾರೆ !

ಶ್ರೀ ಸುಜಯೀಂದ್ರರಿಗೆ ಶ್ರೀ ಗುರುಸಾರ್ವಭೌಮರಲ್ಲಿ ಭಕ್ತಿಗೌರವಗಳ ಮಿತವಾಗಿರುವುದರಿಂದ ಬಂದ ಭಕ್ತರಿಗೆ ಎಲ್ಲ ವಿಧವಾದ ಸೌಕರ್ಯಗಳನ್ನೇರ್ಪಡಿಸಿ,

ದಿನದಿನಕಿಲ್ಲಿ ನೂತನಮಹಿಮೆಗಳಾಗುವುವು.

ಎಂಬುದನ್ನು ತಮ್ಮ ದರ್ಶನಕ್ಕೆಂದು, ಫಲಮಂತ್ರಾಕ್ಷತೆಗಳಿಗೆಂದು ಬಂದು ಮುಂದೆನಿಲ್ಲುವ ಭಕ್ತಜನರಿಗೆ, ಶಿಷ್ಯಕೋಟಿಗೆ ರಾಯರ ಮಹಿಮೆಯನ್ನು, ಈಚೆಗೆ ನಡೆದ ಘಟನೆಗಳನ್ನು ವರ್ಣಿಸಿ, ಜನರಿಗೆ ಗುರುರಾಜರಲ್ಲಿ ಭಕ್ತಿವಿಶ್ವಾಸಗಳನ್ನು ಹೆಚ್ಚಲು ಕಾರಣರಾಗಿರುತ್ತಾರೆ! ೧೦೮ ಶ್ರೀ ಸುಜಯೀಂದ್ರತೀರ್ಥ ಶ್ರೀಪಾದಂಗಳ ವರಿಗೀಗೀಗಲೇ (1968) ಷಷ್ಠಿಪೂರ್ತಿಸಮಾರಂಭವು ಮುಗಿದಿದೆ. ಶ್ರೀಹರಿ ವಾಯು ಗುರುಗಳಿವರಿಗಿತೋಪ್ಯತಿಶಯವಾದ ಆಯುರಾರೋಗ್ಯಗಳನ್ನು ದಯ ಪಾಲಿಸಿ ಸಂರಕ್ಷಿಸಲೆಂದು ಪ್ರಾರ್ಥಿಸುವೆವು.

ಸಂಯಮಿವರೇಣ್ಯ! ನಿನ್ನ ವಂಶಸ್ಥರಲ್ಲಿ
ಆರ್ಯ! ವೇಂಕಟರಾಘವೇಂದ್ರಾಖ್ಯಸೂರಿ
ಪರಮಹಂಸ ಶ್ರೀ ಸುಯಮೀಂದ್ರವರ ಕುಮಾರ
ರಾಮಪೂಜೆಯಮಾಳ್ಪರೈ ! ರಾಘವೇಂದ್ರ !

ದೇಶಿಕೇಂದ್ರ ! ಶ್ರೀ ಸುಜಯೀಂದ್ರತೀರ್ಥರೀಗ
ಚಾರುಭವದೀಯ ಪೀಠರಾಜದಲಿ ಮೆರೆವ
ನಿನ್ನ ಸೇವಿಸಿ ಬಿಡದಂತೆ ನಿನ್ನ ಮಹಿಮೆ
ಬಲ್ಘನತೆ ಪೇಳುತಿಹರಯ್ಯ ! ರಾಘವೇಂದ್ರ !

# ನಮ್ಮ ಅನುಭವಗಳು

ಶ್ರೀ ಗುರುರಾಜರು ಪೀಠಸ್ಥರಾದಾಗ ಅನೇಕ ಮಹಿಮೆಗಳನ್ನು ತೋರಿಸಿದರು. ಬೃಂದಾವನಸ್ಥರಾದಮೇಲೂ ಮಹಿಮೆಗಳು ನಡೆಯುತ್ತಲಿವೆ. ಇಂದಿಗೆ ಶ್ರೀ ಗುರುರಾಜರು ಬೃಂದಾವನಸ್ಥರಾಗಿ ಮೂರು ಶತಮಾನಗಳು ತುಂಬಲಿವೆ. ಈಗಲೂ ರಾಯರು ಭಕ್ತಾಭೀಷ್ಟಪ್ರದರಾಗಿದ್ದಾರೆ ! ಪಿಶಾಚಾದಿ ಬಾಧಾನಿವಾರಣೆ ಮಾಡುವುದಲ್ಲದೆ, ಕೆಲವರಿಗೆ ಪ್ರತ್ಯಕ್ಷ ಫಲಮಂತ್ರಾಕ್ಷತಾ ಅನುಗ್ರಹಿಸುತ್ತಲಿದ್ದಾರೆ ! ರಾಯರ ಮಹಿಮೆಗೆ ಪಾರವಿಲ್ಲ. ಅಂತೆಯೇ ಅಪ್ಪಣಾರ್ಯರು ಶ್ರೀ ಗುರುಸ್ತೋತ್ರದಲ್ಲಿ

ಅಗಮ್ಯಮಹಿಮಾಲೋಕೇ
ರಾಘವೇಂದ್ರೋಮಹಾಯಶಾಃ

ಎಂಬುದಾಗಿ ವರ್ಣಿಸಿರುತ್ತಾರೆ ! ಸಾಂತವಾಗಿ ಗುರುರಾಜರ ಮಹಿಮೆಯನ್ನು ವರ್ಣಿಸುವುದಾಗಲಿ, ರಚಿಸುವದಾಗಲಿ ಸಾಧ್ಯವಲ್ಲ. ಆದರೆ, ಹಲವಾರು ಘಟನೆಗಳು, ಹಿರಿಯರಿಂದ, ಗುರುಗಳಿಂದ ಕೇಳಿದ ಮಹಿಮೆಗಳು, ನಮ್ಮ ಅನುಭವಗಳನ್ನು ರಾಯರು ಬೃಂದಾವನಸ್ಥರಾದಮೇಲೆ ಇತ್ತೀಚೆಗೆ ಜರುಗಿದ ಮಹಿಮೆಗಳನ್ನು ಹಲವಾರು ಕೆಳಗೆ ಚಿತ್ರಿಸಲು ಪ್ರಯತ್ನಿಸಿದ್ದೇನೆ !

ಚಂದ್ರಿಕಾಚಾರ್ಯ ! ಶ್ರೀ ಗುರುಸಾರ್ವಭೌಮಃ !
ರಾಜಯತಿ ನೀನು ! ಶ್ರೀ ಯತಿರಾಜ ನೀನು !
ರಾಜಗುರು ನೀನು ! ಶ್ರೀ ಗುರುರಾಜ ನೀನು !
ರಾಜರಾಜೇಂದ್ರ ! ಯತಿಚಂದ್ರ ! ರಾಘವೇಂದ್ರ !

॥ ಶ್ರೀ ಗುರುರಾಜೋ ವಿಜಯತೇ ॥

# ೪೦ ವರ್ಷಗಳ ತಪಸ್ಸು ಫಲಿಸಿತು !

(ಮಿತ್ರರಾದ ಭೀಮಸೇನ ವಿಶ್ವಾಮಿತ್ರರ ಅನುಭವ)

(ಲೇಖನವೂ ಅವರದೆ)

—೦—

ನಮ್ಮ ಮಾತಾಮಹಂದಿರು ನನಗೆ ಶ್ರೀ ರಾಘವೇಂದ್ರ ಸ್ತೋತ್ರ ಪಾರಾಯಣ ಮಾಡುವುದನ್ನು ಕಲಿಸಿಕೊಟ್ಟರು, ಮಾತಾಪಿತೃಗಳದನ್ನು ನಾನು ಬಿಡದಂತೆ ಅಭ್ಯಾಸಮಾಡಿಸಿದರು. ತುಂಬಾ ಚಿಕ್ಕವನಿದ್ದಾಗ ನಾನು ತಾಯ್ತಂದೆಗಳ ಜೊತೆಯಲ್ಲಿ ಮಂತ್ರಾಲಯ - ಚಿಪ್ಪಗಿರಿಗೆ ಹೋಗಿದ್ದ ನೆನಪು ಮಾತ್ರ ಉಳಿದಿದೆ. ಜ್ಞಾನವಿಲ್ಲದ ಜ್ಞಾಪಕ. ಅದು ಸ್ಮರಣೆಗೆ ಬಂದಾಗಲೆಲ್ಲ ಶ್ರೀ ರಾಯರ ದರ್ಶನಕ್ಕಾಗಿ ಕಾಯುವುದಾಯಿತು ! ಆದರೆ ಆ ಸುದಿನ ಬರಬೇಕಲ್ಲ !

"ನಮೋ ನಮೋ ಜೀಯ
ಶ್ರೀ ರಾಘವೇಂದ್ರಯತಿ ಸಾರ್ವಭೌಮಾ"

ಎಂದು ಹಂಬಲಿಸಿ ಹಂಬಲಿಸಿ ೪೦ ವರ್ಷಗಳು ಕಳೆದೆ. ಮಂತ್ರಾಲಯಕ್ಕೆ ಹೋಗಿಬರಲಾಗಲಿಲ್ಲ ! ಕರದಲ್ಲಿಗೆ ಬರುವ ಗುರುರಾಜರು ತಮ್ಮ ಚಿತ್ತಕ್ಕೆ ಬಂದರೆ ಮಾತ್ರ ಕರೆಸಿಕೊಳ್ಳುತ್ತಾರೆ !

**ಸರ್ವಾಭೀಷ್ಟ ಪ್ರವೃದ್ಧಿಃ ಸ್ಯಾತ್ - ಇಷ್ಟಾರ್ಥ ಸಮೃದ್ಧಿರೇವ ಇಷ್ಟಾರ್ಥ ಸ್ಯೈರ್ನಸಂಶಯಃ ಅಪೇಕ್ಷಿತಪ್ರದಾತಾ !**

ಕರುಣಿಸೋ ಎಂಬುದಾಗಿ ಗುರುರಾಜರನ್ನು ಬಾರಿಬಾರಿಗೂ ಪ್ರಾರ್ಥಿಸಿದೆ! ಕಾಲನಿಯಾಮಕ ಪರಮಾತ್ಮನ ಚಿತ್ತಕ್ಕೆ ಬರಲಿಲ್ಲ. ಓ ಗುರುರಾಜಾ ನಿನ್ನ ದರ್ಶನಭಾಗ್ಯಕರುಣಿಸಯ್ಯಾ ! ಕರುಣಾ ಸಮುದ್ರಾ ! ಎಂಬುದಾಗಿ ಬಿನ್ನವಿಸಿ ಗುರುರಾಜರಿಂದ ರಚಿತವಾದ "**ಪ್ರಾತಃ ಸಂಕಲ್ಪಗದ್ಯ**" ಶುಭಮುಹೂರ್ತದಲ್ಲಿ ಪ್ರಾರಂಭಮಾಡಿದೆ !

ಆಕಸ್ಮಿಕವಾಗಿ ನಮ್ಮ ತಾಯಿಯವರಾದ **ಲಕ್ಷ್ಮೀದೇವಮ್ಮ**ನವರೊಬ್ಬರೇ ಮಂತ್ರಾಲಯಕ್ಕೆ ಹೋಗಿಬಂದರು. ಶ್ರೀ ರಾಯರ ಸೇವೆಮಾಡಿ "ಪ್ರಭೋ ! ನಿಮ್ಮ ಅನುಗ್ರಹದಿಂದ ಹುಟ್ಟಿದ ನನ್ನ ಮಗ ಚಿಕ್ಕವನಿದ್ದಾಗ ನಿಮ್ಮಲ್ಲಿಗೆ ಬಂದಿದ್ದ. ಈಗ ನಿಮ್ಮ ದರ್ಶನಕ್ಕಾಗಿ ಹಂಬಲಿಸುತ್ತಾನೆ ! ನಿಮ್ಮ ದರುಶನ ಭಾಗ್ಯ ಕರುಣಿಸಿ" ಎಂದು ಪ್ರಾರ್ಥಿಸಿ ಬಂದು ವಿಷಯತಿಳಿಸಿ, ನಾನು ನನ್ನ ಜೀವಮಾನದಲ್ಲಿ ಒಂದುಸಲವಾದರೂ ಮಂತ್ರಾಲಯಕ್ಕೆ ಹೋಗಿಬರಬೇಕೆಂದು ಸೂಚಿಸಿದರು.

ಶ್ರೀ ರಾಯರಲ್ಲಿ ಐಹಿಕ ಸಂಪತ್ತು ಕೇಳಲಿಲ್ಲ ಜ್ಞಾನ - ಭಕ್ತಿ - ವೈರಾಗ್ಯ ಗಳನ್ನೆ ನಾನು ಬೇಡಿದೆ !

ಸಚ್ಛಾಸ್ತ್ರಾಭ್ಯಾಸಕ್ಕಾಗಿ ಶ್ರೀಮಧ್ವ ಶಾಸ್ತ್ರ ಸಂಪನ್ನರಾದ **ಶ್ರೀ ಎಲನೋಲಿ ವಾಸುದೇವಾಚಾರ್ಯ**ರಲ್ಲಿ ಗುರ್ವನುಗ್ರಹಕ್ಕಾಗಿ ಶಿಷ್ಯವೃತ್ತಿ ವಹಿಸಿದೆ ! **ಮಣಿಮಂಜರಿ – ಸುಮಧ್ವವಿಜಯ – ಖಂಡನತ್ರಯ ದಶಪ್ರಕರಣ**

ವ್ಯಾಸಂಗಮಾಡಿ ಶ್ರೀ ರಾಯರ ಕೃತಿ **ಈಶಾವಾಸ್ಯ ಉಪನಿಷತ್ ಖಂಡಾರ್ಥ** ಪ್ರಾರಂಭಮಾಡಿ ರಾಯರ ಗ್ರಂಥಗಳ ಹಿರಿಮೆ ತಿಳಿದುಕೊಂಡೆ.

ಯಾವಜ್ಜೀವಿತ ಮಿಚ್ಛೇತ್ ತಾವತ್ಕರ್ಮಾಣಿ
ಕುರ್ವನ್ನೇವ, ಆಮರಣಂ ಭಗವತ್ಪೂಜತ್ನ
ಕಾನಿ, ಅಸಂಕಲ್ಪಿತ ಫಲಾನಿ ಸ್ವೋಚಿತಾನಿ
ಕರ್ಮಾಣಿ ಸರ್ವಧಾ ಕುರ್ಯಾತ್ ॥

ಸ್ವೋಚಿತ ಕರ್ಮಾನುಷ್ಠಾನ, ಜ್ಞಾನಾರ್ಥಿಗೆ ಅತ್ಯಾವಶ್ಯಕವೆಂದು **ನಿಷ್ಠಾವಂತನಾಗೆಂದು** ಪರಾಭವ ಜ್ಯೇಷ್ಠದಲ್ಲಿ ಒಂದು ರಾತ್ರಿ ಸ್ವಪ್ನ ವಾಯಿತು ! ಶ್ರೀ ಗುರುರಾಜರ ದಿವ್ಯವಾದ ಮೂರ್ತಿ ಕಣ್ಮುಂದೆ ನಿಂತು.

**'ಆಚಾರ್ಯ ! ಏಳು ! ಹೊರಟು ಬಾ'**

ಎಂಬುದಾಗಿ ಅಪ್ಪಣೆಯಾಯಿತು ! ಅನುಗ್ರಹವಾಯಿತು ! ಧನ್ಯನಾದೆ ಪ್ರಭೋ ! ಇದೋ ಬಂದೆ ಎಂಬುದಾಗಿ ನುಡಿದೆ.

ಮರುದಿನವೇ ಪ್ರಯಾಣಬೆಳಸಿದೆ. ಮಂತ್ರಾಲಯಸೇರಿದೆ. ತುಂಗೆಯಲ್ಲಿ ಮಿಂದೆ ಆಹ್ನೀಕವುಗಿಸಿಕೊಂಡು ಬಂದೆ, ರಾಯರ ಬೃಂದಾವನದ ಮುಂದೆ ನಿಂದೆ !

**ನೋಡಿದೆನು ಗುರುರಾಘವೇಂದ್ರರ**
**..............ಮಹಿಮರ ನೋಡಿದೆ.**

ಎಂದುಪಾಡಿದೆ. ಸಾಷ್ಟಾಂಗ ಪ್ರಣಾಮಮಾಡಿ ಎದ್ದುನಿಂತು ನೋಡಿದೆ. ಸ್ವಪ್ನದಲ್ಲಿ ದರ್ಶನವಿತ್ತ ಮೂರ್ತಿ ಕಣ್ಮುಂದೆ ಕೂತಿದೆ !

**"ಬಂದಿರಾ – ಬನ್ನಿ – ಹಿಡಿಯಿರಿ"** ಎಂದಿತು. ಕೈಯೊಡ್ಡಿದೆ ! ಗಂಧ - ಮಂತ್ರಾಕ್ಷತೆ ಅನುಗ್ರಹಿಸಿದರು. ಪರವಶನಾದೆ ! ವರ್ಣನಾತೀತವಾದ ಆಮಂದಾನಂದವಾಯಿತು ! ಅನುಜ್ಞೆಪಡೆದು **ಸ್ವಾಮಿನಃ ಪುನರ್ದರ್ಶನಂ**

ಎಂದು ಬಂದೆ. ಪುನಃ ಎರಡೇ ತಿಂಗಳಲ್ಲಿ ಶ್ರೀ ಪರಾಭವಸಂವತ್ಸರದ ಶ್ರೀ ರಾಯರ ಆರಾಧನೆಗೆ ಕರೆಸಿಕೊಂಡರು. ಆಗ ಸಪ್ತರಾತ್ರೋತ್ಸವದ ಪರ್ಯಂತ ಶ್ರೀ ಗುರುರಾಜರ ಸೇವೆಮಾಡಿ – ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಪೀಠಾಧಿಷ್ಠಿತರಾದ ಶ್ರೀ ಸುಜಯೀಂದ್ರ ತೀರ್ಥ ಶ್ರೀಪಾದಂಗಳವರಿಂದ ಫಲಮಂತ್ರಾಕ್ಷತೆ ಪಡೆದು ಬಂದೆ.

ನಲವತ್ತು ವರ್ಷಗಳ ತಪಸ್ಸು ಫಲಿಸಿತು !

ಶ್ರೀರಾಂಪುರ ಶ್ರೀ ಗುರುರಾಜರ ಶ್ರೀರಾಮತನಯಪಾದಸೇವಕ
ಬೆಂಗಳೂರು (ಭೀಮಸೇನ ವಿಶ್ವಾಮಿತ್ರಃ)

ಶ್ರೀ M. R. ಭೀಮಸೇನ ವಿಶ್ವಾಮಿತ್ರರು ವಿದ್ಯುಚ್ಛಕ್ತಿ ಮಂಡಳಿ (M. S. E. B.) ಯಲ್ಲಿ ಉದ್ಯೋಗದಲ್ಲಿದ್ದಾರೆ.

## ಅತ್ತಿಗೆಯ ಮಾಂಗಲ್ಯ ಕಾಪಾಡಿದರು

ಇದು 1950ರ ಮಾತು, ನಮ್ಮ ಅಣ್ಣನವರಾದ ಹನುಮಂತಾಚಾರ್ಯರಿಗೆ ತುಂಬಾ ಕಾಯಿಲೆ ಆಯಿತು. ವ್ಯಾಧಿಯು ಗುಣವಾಗುವದಿಲ್ಲವೆಂಬ ವೈದ್ಯರ ಅಭಿಪ್ರಾಯವನ್ನು ತಿಳಿದು ಭವರೋಗ ವೈದ್ಯರಾದ ಶ್ರೀ ರಾಘವೇಂದ್ರರನ್ನೇ ಆಶ್ರಯಿಸಬೇಕಾಯಿತು. ಸೇವೆ ಮಾಡಲು ಅಣ್ಣನವರಿಗೆ ಶಕ್ತಿ ಸಾಲದು. ಚೈತನ್ಯವಿರಲಿಲ್ಲ. ಆಗ ಕುಂ|| ಸೌ|| ವತಿ ನಮ್ಮ ಅತ್ತಿಗೆಯು ಮಂತ್ರಾಲಯಕ್ಕೆ ಪ್ರಯಾಣಮಾಡಿದಳು !

ಸತೀಸಾವಿತ್ರಿಯು ಯಮನೊಡನೆ ಹೋರಾಡಿ ಪತಿಯ ಪ್ರಾಣಗಳನ್ನು ತಂದಳೆಂದು ಕೇಳಿದ್ದೇವೆ. ಆದರೆ ನಮ್ಮ ಅತ್ತಿಗೆಯು ಕಾಣದಾದ ಯಮನೊಡನೆ

ಹೋರಾಡಬೇಕಾಯಿತು ನಿದ್ರಾಹಾರಗಳನ್ನು ತೊರೆದು, ಕಠೋರ ದೀಕ್ಷೆಯಿಂದ, ಭಕ್ತಿಪೂರ್ವಕವಾಗಿ ಶ್ರೀ ಗುರುರಾಜರ ಸೇವೆಯನ್ನು ಮಾಡಿದರು. ಸಪ್ತಾಹದಲ್ಲಿ ಶ್ರೀ ರಾಯರು ಪ್ರಸನ್ನರಾದರು. ಫಲಮಂತ್ರಾಕ್ಷತೆಗಳನ್ನು ತೆಗೆದುಕೊಂಡು ಬಂದರು. ನಮಗೆ ಸಮಾಧಾನವಾಯಿತು ! ನಮ್ಮ ಅತ್ತಿಗೆ ಶ್ರೀಮತಿ **ಸುಭದ್ರಮ್ಮನವರ ಮಾಂಗಲ್ಯಬಲದಿಂದ ನಮ್ಮ ಅಣ್ಣನವರು ಬದುಕಿದರು.**

ಅನಂತರ ಆಯುರ್ವೇದ ಶಾಸ್ತ್ರದಲ್ಲಿ ನಿಪುಣರಾದ **ಭಿಷಗ್ರತ್ನ ರಾಮ ದುರ್ಗದ ಭೀಮರಾಯರಲ್ಲಿ** ನಮ್ಮ ಅಣ್ಣನವರಿಗೆ ಚಿಕಿತ್ಸೆ ನಡೆಯಿತು ! ಶ್ರೀ ಗುರುಸಾರ್ವಭೌಮರ ಅವ್ಯಾಜ ಕರುಣೆಯಿಂದ ಬೇಗನೆ ಆರೋಗ್ಯಭಾಗ್ಯವು ಲಭಿಸಿತು ! ಪೂಜ್ಯದಂಪತಿಗಳಿಬ್ಬರೂ ಶ್ರೀ ರಾಯರ ಅಂತರಂಗಭಕ್ತರು, ಅಂತಃ ಕರಣಶುದ್ಧಿಯುಳ್ಳವರು. ತ್ಯಾಗಮೂರ್ತಿಗಳು, ಸದಾ ಶ್ರೀ ರಾಯರ ಸೇವೆಗೆ ಸಿದ್ಧರಾಗಿರುತ್ತಾರೆ. ಶಕ್ತಿವಂಚನೆ ಇಲ್ಲದೆ ಭಕ್ತಿವಿಶ್ವಾಸಗಳಿಂದ ಗುರುರಾಜರ ಸೇವೆಯನ್ನು ಮಾಡುತ್ತಾ ಅವರ ಕೃಪೆಗೆ ಪಾತ್ರರಾಗಿ ಮದ್ರಾಸಿನಲ್ಲಿ ಟ್ರಿಪ್ಲಿಕೇನ್‌ನಲ್ಲಿ ಶ್ರೀ ಮದುತ್ತರಾದಿ ಮಠದ ಪಕ್ಕದಲ್ಲಿ ವಾಸವಾಗಿದ್ದಾರೆ !

**ಗುರುರಾಜರು ನಮ್ಮ ಅತ್ತಿಗೆಯ ಮಾಂಗಲ್ಯಕಾಪಾಡಿದರು**

## ನಾನೂ ಬದುಕಿದೆ

1942ರಲ್ಲಿ ಸುಷುಪ್ತಾವಸ್ಥೆಯಲ್ಲಿದ್ದಾಗ ಮತ್ತು 1950ರಲ್ಲಿ ಪ್ರವಾಸದಲ್ಲಿದ್ದಾಗ ಹಾವುಕಚ್ಚಿ ಸಾಯಬೇಕಾದ ನನ್ನನ್ನು ಶ್ರೀ ಗುರುರಾಜರು ಕಾಪಾಡಿದರು. 1961ರಲ್ಲಿ ನಾನು ಸಾಗರದಲ್ಲಿದ್ದಾಗ ನನಗೆ ತುಂಬಾ ಕಾಯಿಲೆ ಆಯಿತು. (Liver Trouble) ಪಾರಾಗುವುದು ಅನುಮಾನಾಸ್ಪದವಾಯಿತು. ಹಿತೈಷಿಗಳಾದ

**ಶ್ರೀ ಉಳ್ಳೂರು ಗೋಪಾಲಕೃಷ್ಣರಾಯರು**
**ಶ್ರೀ ಕೆ. ಜಿ. ವೆಂಕಟಾಚಲಪ್ಪನವರು**

ಭೀಮನಂತಿದ್ದ ನಾನು ಬಕನಂತೆ ಆದದ್ದು ನೋಡಿ ಆರೋಗ್ಯವು ತುಂಬಾ ಕ್ಷೀಣದಶೆಯಲ್ಲಿದೆ, ರಾಯರೇ ಕಾಪಾಡಬೇಕು ! ಎಂಬುದಾಗಿ ಎಚ್ಚರಿಸಿದರು. ಶ್ರೀ ಅಪ್ಪಣಾಚಾರ್ಯರು ಶ್ರೀ ಗುರುಸ್ತುತಿಯಲ್ಲಿ ಅಪ್ಪಣೆಕೊಟ್ಟಂತೆ,

**ಪೂರ್ಣಾಯುಃ ಪೂರ್ಣಸಂಪತ್ತಿಃ**
**ಸ್ತೋತ್ರಸ್ಯಾಸ್ಯ ಜಪಾದ್ಭವೇತ್ ॥**

ಎಂಬುದಕ್ಕೆ ರಾಯರು ತಮ್ಮ ಒಪ್ಪಿಗೆಯನ್ನು ಕೊಟ್ಟಿದ್ದಾರೆ ! ಅದು ಸತ್ಯವಾದರೆ ನನಗೆ ಆರೋಗ್ಯವಾಗುತ್ತದೆ, ಬದುಕುತ್ತೇನೆ ಎಂಬ ಭರವಸೆ ನನಗಿದೆ. ಗುರುರಾಜರನ್ನೆ ನಂಬಿಕೊಂಡಿದ್ದೇನೆ ! ಮಾನವ ಮಾತ್ರರಿಂದ ಆಗಲಾರದನ್ನು ರಾಯರು ಅನುಗ್ರಹಿಸುತ್ತಾರೆ ! ಎಂಬುದಾಗಿ ನುಡಿದು, ಭಾರವನ್ನು ಶ್ರೀ ರಾಯರಮೇಲೆ ಹಾಕಿ ಕಾಲಕಳೆದೆ.

ಅನಂತರ ಪ್ರವಾಸದಲ್ಲಿದ್ದಾಗ ಶ್ರೀಮಂತಸನ್ಮಿತ್ರರಾದ **ಶ್ರೀ ಹೊಸಬಾಳೆ ನಾರಾಯಣರಾಯರು** ಚಿಂತಾಜನಕವಾದ ನನ್ನ ಆರೋಗ್ಯಪರಿಸ್ಥಿತಿಯನ್ನು ನೋಡಿ ನನ್ನನ್ನು ಕೋಣನ ಕಟ್ಟೆಗೆ ಕರೆದೊಯ್ದರು. ಅಲ್ಲಿ ಭಿಷಗ್ರತ್ನ **ಶ್ರೀ ನಂಜುಂಡರಾಯರು** ನಾಡೀ ಪರೀಕ್ಷೆಮಾಡಿ ಮೂರು ಬೇರುಗಳನ್ನು ಕೊಟ್ಟರು. ಔಷಧಕ್ಕಿಂತಲೂ ಪಥ್ಯಮುಖ್ಯವೆಂದು ತಿಳಿಸಿ ಭಯಪಡಬೇಕಾಗಿಲ್ಲ ವೆಂದು ಧೈರ್ಯವಿತ್ತರು. ಮೂರು ವಾರಗಳಲ್ಲಿ ವ್ಯಾಧಿಯು ಪೂರ್ಣಗುಣ ವಾಯಿತು ! ಹಣಕಾಸುಗಳ ಖರ್ಚಿಲ್ಲದೆ ಗುಣಪಡಿಸಿ ಜೀವದಾನಮಾಡಿದರು ಶ್ರೀ ನಂಜುಂಡರಾಯರು ಇವರಿಗೆ ನಾನು ಚಿರಋಣಿ !

**ಶ್ರೀ ರಾಯರ ಅನುಗ್ರಹದಿಂದ ನಾನು ಬದುಕಿದ !**

## ತೆಲುಗಿನಲ್ಲಿ ಗುರುಚರಿತ್ರೆ ಬರೆಸಿದರು

ಮಾತೃ ಶ್ರೀಯವರಾದ **ನರಸಾಂಬೆಯು** ದರ್ಶನ ನನಗೆ ಇಲ್ಲವಾಯಿತು ! ಬುದ್ಧಿಬರುವ ಮುನ್ನ ನಮ್ಮ ತಂದೆ **ಕೃಷ್ಣಾಚಾರ್ಯರು** ನಮ್ಮನ್ನಗಲಿದರು,

ಪ್ರಕೃತ ತಿರುಮಲ ನಿವಾಸಿಗಳಾದ ನಮ್ಮ ಸೋದರಮಾವನವರಾದ ದೈವಜ್ಞ ಶಿರೋಮಣಿ ನಾಗಲಾಪುರದ ಜೋಯಿಸ್ ಸ್ವಾಮಿರಾಯಾಚಾರ್ಯರು ನನ್ನನ್ನು ಸಾಕಿ ಸಲಹಿದರು. ಬಳ್ಳಾರಿಯಲ್ಲಿ ವಿದ್ಯಾಭ್ಯಾಸವು ಮುಗಿದ ನಂತರ ಶಾಲೆಯಲ್ಲಿ ತೆಲುಗು ಪಂಡಿತರಾಗಿದ್ದು ಪಾಠ ಹೇಳಿದ ವಿದ್ವಚ್ಛಿರೋಮಣಿಃ ಭಾಗವತ ರತ್ನಂ ಘೂಳೀ ಕೃಷ್ಣಮೂರ್ತ್ಯಾಚಾರ್ಯರು ನನಗೆ ಆದರದಿಂದ ಕವಿತೆಯನ್ನು ಕಲಿಸಿದರು. ಕೀ|| ಶೇ|| ಕವಿಭೂಷಣ ಕಪ್ಪಗಲ್ಲು ಸಂಜೀವಮೂರ್ತಿರಾಯರು (ಬಳ್ಳಾರಿ) ನನ್ನ ಕವಿತ್ವವನ್ನು ಮೆಚ್ಚಿಕೊಂಡು, ಪ್ರೋತ್ಸಾಹ ವಾಕ್ಯಗಳನ್ನಾಡಿ ಪೋಷಣೆಮಾಡಿದರು. ನಾನು ಸ್ವಗ್ರಾಮವಾದ ಹೊನ್ನೂರು, ಹುಟ್ಟಿದ ಊರಾದ ನಾಗಲಾಪುರವನ್ನು ಬಿಟ್ಟು ಬಳ್ಳಾರಿಯಲ್ಲೇ ಬೆಳೆದು ನೆಲೆಸಬೇಕಾಯಿತು !

'ಶ್ರೀ ಗುರುಚರಿತ್ರೆ, ಶತಕ, ನಕ್ಷತ್ರಮಾಲಾ' ಹರಿಗುರುಸ್ತವನ ಮಾಲಿಕೆ, ಈ ಕಾವ್ಯಗಳನ್ನು ಮೊದಲು ತೆಲುಗಿನಲ್ಲಿ ಬರೆದೆ. ನಂತರ ಕನ್ನಡಕ್ಕೆ ಅನುವಾದ ಮಾಡಿದ್ದೇನೆ. ಗುಣನಿಧಿಯಾದ ಪ್ರಹ್ಲಾದನ (ಶ್ರೀ ರಾಯರ) ಗುಣ, ಮಹಿಮಾವರ್ಣನೆ, ಎಷ್ಟು ವಿಧವಾಗಿ ಬಣ್ಣಿಸಿದರೂ ಸಾಲದು. ತೃಪ್ತಿಯೇಇಲ್ಲ ! ದೇವತೆ (ಶತ್ರುಗಳು) ಗಳ ಪ್ರಶಂಸೆಗೆ ಪಾತ್ರನಾದ ಗುಣನಿಧಿಯಲ್ಲವೇ ದೈತ್ಯಬಾಲಕನಾದ ಶ್ರೀ ಪ್ರಹ್ಲಾದನು !

1962ರಲ್ಲಿ ನನ್ನ ಜ್ಯೇಷ್ಠಪುತ್ರನಾದ ಚಿ|| ನರಸಿಂಹಮೂರ್ತಿಯ ಬ್ರಹ್ಮೋಪದೇಶವು ಶ್ರೀ ಮಂತ್ರಾಲಯದಲ್ಲಿ ಶ್ರೀ ಗುರುರಾಜರ ಸನ್ನಿಧಿಯಲ್ಲಿ ಜರುಗಿತು ! (ಈಗ ಪೀಠಸ್ಥರಾದ ಶ್ರೀ ಸ: ಜಯೀಂದ್ರರು) ಶ್ರೀ ವೇಂಕಟ ರಾಘವೇಂದ್ರಾಚಾರ್ಯರು ಹಿತನುಡಿಯನ್ನು ನುಡಿದು, ಪ್ರಸಾದವನ್ನಿತ್ತು ವಟುವನ್ನಾಶೀರ್ವದಿಸಿದರು. ಶ್ರೀ ಮಠದ ಶಿಬ್ಬಂದಿಗೆ ಸೇರಿದ ಶ್ರೀ C. S. ರಂಗನಾಥಾಚಾರ್ಯರು ಪುಸ್ತಕ ವ್ಯಾಪಾರಿಗಳು, ಚಂದ್ರಿಕಾ ಬುಕ್ ಸ್ಟಾಲ್ ಇವರು ನನ್ನನ್ನು ಶ್ರೀ ರಾಯರ ಬೃಂದಾವನದ ಮುಂದೆ ಕರೆದೊಯ್ದು, ನನ್ನಿಂದ ಶ್ರೀ ಗುರುರಾಜರಿಗೆ ಮಂಗಳಾರತಿ ಮಾಡಿಸಿ ಶ್ರೀ ಗುರುಚರಿತ್ರೆ, ತೆಲುಗಿನಲ್ಲಿ ವಚನ ಕಾವ್ಯ ಬರೆದೇ ಮಂತ್ರಾಲಯವನ್ನು ಬಿಡುವಂತೆ ಪ್ರಾರ್ಥನಾಪೂರ್ವಕ

ಸಂಕಲ್ಪವನ್ನು ಮಾಡಿಸಿ, ತಾವೂಮಾಡಿದರು. ಅಂದಿನಿಂದ 15 ದಿನಗಳು ಅಹೋರಾತ್ರಿಗಳು ವಿರಾಮವಿಲ್ಲದೆ ಗುರುಚರಿತ್ರೆ ಬರೆದದ್ದಾಯಿತು. ಮರುದಿವಸ ಏಕಾದಶಿ ಪ್ರಯಾಣನಿರ್ಧಾರವಾಯಿತು. ಶುಭಕಾರ್ಯಕ್ಕೆ ಬಂದ ಬಂಧುಗಳೆಲ್ಲರೂ ಪ್ರಯಾಣಕ್ಕೆ ಸಿದ್ಧರಾದರು. ಕಾವ್ಯರಚನೆ ಮುಗಿಯಲಿಲ್ಲ. ಹೊರಡುವಂತಿಲ್ಲ. ರಚನೆ ಮುಗಿದಿದೆ, ಇರುವಂತೆಯೂ ಇಲ್ಲ.

ಏಕಾದಶಿ ಬೆಳಿಗ್ಗೆ 9ಗಂಟೆಯಾಯಿತು ! ಹೊರಡುವ ಅವಸರ ನನ್ನ ಸೌ।ವತಿ ಸುಮಿತ್ರಾಬಾಯಿಯು ಬಂದು ಅವಸರಪಡಿಸಿದಳು. ಇನ್ನು 90ನಿಮಿಷಗಳ ರಚನೆ ಉಳಿದಿವೆ. ಬಸ್ಸುಬರಲು ಒಂದೇ ತಾಸು ಸಮಯವಿದೆ. ಅನುಮಾನಿಸುತ್ತಿದ್ದ ಸೌ।ವತಿಗೆ ಹೀಗೆ ತಿಳಿಸಿದೆ.

"ನಿನಗಿನ್ನೂ ರಾಯರ ಮಹಿಮೆಯ ಅರಿವಾಗಲಿಲ್ಲವೇ ? ರಚನೆಯು ಮುಗಿದ ನಂತರ ಇದೇ ದಿವಸ ಅದೇ ಬಸ್ಸಿಗೆ ನಮ್ಮ ಪ್ರಯಾಣ. ಈ ದಿನ ಬಸ್ಸು ತಡವಾಗಿಬರುತ್ತದೆ. ಬೇಕಾದರೆ ಪರೀಕ್ಷೆ ನಡೆಯಲಿ" ಎಂಬುದಾಗಿ ನುಡಿದು ಕಾರ್ಯೋನ್ಮುಖನಾದೆ ! ಚರಿತ್ರೆಯನ್ನು 11ಗಂಟೆಯ ಸಮಯಕ್ಕೆ ಬರೆದು ಮುಗಿಸಿದ್ದಾಯಿತು. ಅನಂತರ ಮಠಕ್ಕೆ ಹೋಗಿ ಶ್ರೀ ರಾಯರ ದರ್ಶನಪಡೆದು ಬಂದೆ. 10ಗಂಟೆಗೆ ಬಿಡಬೇಕಾದ ಬಸ್ಸು 70ನಿಮಿಷಗಳು ತಡವಾಗಿ ಬಂದಿತು ! ಬಂಧುಗಳು ರಾಯರ ಮಹಿಮೆಗೆ ಬೆರಗಾದರು.

ಪಾಮರನಾದ ನನ್ನಿಂದ ಗುರುಚರಿತ್ರೆ ಬರೆಸಿದರು !

## ಅಂಧತ್ವಕಳೆದರು - ಕಣ್ಣುಬಂದಿತು !

ಇದು ಸುಮಾರು 30ವರ್ಷಗಳ ಹಿಂದೆ ಜರುಗಿದ ಮಹಿಮೆ. **ಮುಂದ್ರಿಗಿ** ವೆಂಕಣ್ಣಾಚಾರ್ಯರಿಗೆ ಸೂರ್ಯಗ್ರಹಣವನ್ನು ಕನ್ನಡಕವಿಲ್ಲದೇ ನೋಡಿದ್ದರಿಂದ

ಕಣ್ಣು ಕಾಣದಾದವು. ಅವರು ಸೊಲ್ಲಾಪುರದಲ್ಲಿರುವಾಗ ಅವರಿಗೆ ಆದ್ಯ ಕೇಶವಾಚಾರ್ಯರ ಪರಿಚಯವಾಯಿತು. ಆಚಾರ್ಯರು ಶ್ರೀ ರಾಯರ ಮಹಿಮೆಯನ್ನು ತಿಳಿಸಿ, ಗುರುರಾಜರ ಮೃತ್ತಿಕೆಯನ್ನಿತ್ತು ಲೇಪಿಸಿಕೊಳ್ಳಲು ಹೇಳಿ, ರಾಯರು ಕಾಪಾಡುತ್ತಾರೆ ಭಯಪಡಬೇಕಾಗಿಲ್ಲ. ಅವರನ್ನೆ ಭಕ್ತಿವಿಶ್ವಾಸಗಳಿಂದ ಪೂಜೆ ಮಾಡಲು ತಿಳಿಸಿ ಕಣ್ಣು ಬರುವುದಾಗಿ ಭರವಸೆ ಇತ್ತರು.

ವೆಂಕಣ್ಣಾಚಾರ್ಯರು ಪ್ರತಿದಿನ ಸ್ನಾನಾಹ್ನೀಕಗಳನ್ನು ಮುಗಿಸಿಕೊಂಡು ರಾಯರ ಮೂಲಮೃತ್ತಿಕೆಯನ್ನು ಕಣ್ಣಿನ ರೆಪ್ಪೆಗಳಿಗೆ ಲೇಪನಮಾಡಿಕೊಂಡು ಗುರುರಾಜರ ಸ್ಮರಣೆಮಾಡುತ್ತಿದ್ದರು ಹೀಗೆ ಕೆಲದಿನಗಳು ಕಳೆದನಂತರ ಆಚಾರ್ಯರು, ಉದ್ಯೋಗದ ದೆಶೆಯಿಂದ ನೇತ್ರವೈದ್ಯರಲ್ಲಿ ಪರೀಕ್ಷೆಗೆ ಹೋಗಬೇಕಾಯಿತು. ಉದ್ಯೋಗಕ್ಕೆ ಡಾಕ್ಟರರ ಸರ್ಟಿಫಿಕೇಟ್ ಅಗತ್ಯವಲ್ಲವೇ ! ಆಚಾರ್ಯರು ಗುರುರಾಜರನ್ನು ಸ್ಮರಿಸಿ ಆಸ್ಪತ್ರೆಯಲ್ಲಿ ಕಾಲಿಟ್ಟರು. ಗುರುಕೃಪೆಗೆ ಪಾತ್ರರಾದಮೇಲೆ ಕೇಳಬೇಕಾದ್ದೇನಿದೆ. ಆಚಾರ್ಯರಿಗೆ ಕಣ್ಣು ಬಂದಿತು. ಇತರರ ಸಹಾಯವಿಲ್ಲದೆ ನಡೆದರು. ನೇತ್ರವೈದ್ಯರ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಸರ್ಟಿಫಿಕೇಟ್ ದೊರೆಯಿತು ! ಉದ್ಯೋಗ ಲಭಿಸಿತು !

"ಅಂಧೋಪಿ ದಿವ್ಯದೃಷ್ಟಿಸ್ಯಾ
ದೇಡಮೂಕೋಪಿವಾಕ್ಪತಿಃ

ಎಂಬುದಾಗಿ ಶ್ರೀ ಗುರುಸ್ತೋತ್ರದಲ್ಲಿ ಅಪ್ಪಣಾಚಾರ್ಯರು ಅಪ್ಪಣೆ ಕೊಟ್ಟಿರುತ್ತಾರೆ ! ಹುಟ್ಟುಕುರುಡನಿಗೆ ದಿವ್ಯದೃಷ್ಟಿಯನ್ನು ಕರುಣಿಸಲು ಸಮರ್ಥರಾದ ಗುರುರಾಜರು, ಆಚಾರ್ಯರಿಗೆ ಜೀವನದಲ್ಲಿ ಕಳೆದುಕೊಂಡ ಕಣ್ಣುಗಳನ್ನು ಕರುಣಿಸಿದರೆಂದರೆ ಆಶ್ಚರ್ಯವೇನು ? ಆದರೆ, ಮಹಾತ್ಮರು ತಮ್ಮ ಜೀವಿತ ಕಾಲದಲ್ಲಿ ಮಹಿಮೆಗಳನ್ನು ತೋರಿಸಿದುದನ್ನು ಕಾಣುತ್ತೇವೆ. ಕೇಳಿದ್ದೇವೆ. ಆದರೆ ಶ್ರೀ ರಾಯರು ಬೃಂದಾವನಸ್ಥರಾಗಿ ಮೂರನೇ ಶತಮಾನದಲ್ಲಿ ಅವರ ಮೃತ್ತಿಕಾಲೇಪನದಿಂದ, ಗುರುಸ್ತೋತ್ರಪಠಣೆಯಿಂದ ಕಣ್ಣುಗಳುಬಂದವು ಎಂಬುದು ಸೋಜಿಗದ ವಿಷಯವೇ ಸರಿ !

# ಮೂಕನು ಮಾತನಾಡಿದನು

ಪೂನಾಪಟ್ಟಣ ವಾಸಿಯಾದ ಖಂಡೇಲ್ಕರ್ ದೊಡ್ಡ ಶ್ರೀಮಂತ ವ್ಯಾಪಾರಿ. ಇದ್ದಕ್ಕಿದ್ದಂತೆ ಆತನಿಗೆ ಮಾತುನಿಂತಿತು. ಮೂಕನಾದನು. ನಿಪುಣ ರಾದ ವೈದ್ಯರು ಪರೀಕ್ಷೆಮಾಡಿ, ಚಿಕಿತ್ಸೆ ನಡೆಸಿ, ಪ್ರಯೋಜನವಿಲ್ಲವೆಂದು ತಿಳಿಸಿದರು. ಆಗ ಆತನು ತನ್ನ ಮಿತ್ರರಾದ ಶ್ರೀ ಎನ್. ಟಿ. ಪಪ್ಪುಅವರ ಸಂಗಡ ಸೇರಿ ತನ್ನ ದುರವಸ್ಥೆಯನ್ನು ಹೇಳಿಕೊಳ್ಳಲು ಬಾಯಿಯಿಲ್ಲದೆ, ಚೀಟಿ ಯಲ್ಲಿ ಬರೆದು ತೋರಿಸಿದನು. ಗುರುರಾಜರ ಭಕ್ತನಾದ ಪಪ್ಪು, ಖಂಡೇಲ್ಕರ್‌ಗೆ ಶ್ರೀ ರಾಯರ ಮಹಿಮೆಯನ್ನು ತಿಳಿಸಿ ಅವರು ಅನುಗ್ರಹಿಸಿದರೆ ಮಾತಾಡಲು ಬರುತ್ತದೆಂಬುದಾಗಿ ಧೈರ್ಯವನ್ನೂ ಕೊಟ್ಟರು ! ರಾಯರ ಸೇವೆಯನ್ನು ಮಾಡಬೇಕೆಂದು, ಕರ್ತವ್ಯವನ್ನು ಸೂಚಿಸಿದರು.

ಖಂಡೇಲ್ಕರ್ ಅಂದಿನಿಂದ ಪ್ರತಿದಿನ ಶ್ರದ್ಧಾಭಕ್ತಿಗಳಿಂದ ಗುರುರಾಜರ ಸೇವೆಯನ್ನು ಮಾಡಿದನು. ಹೀಗೆ ಇಪ್ಪತ್ತು ದಿನಗಳುರುಳಿದವು. ಅಂದು ರಾತ್ರಿ ಗುರುರಾಜರನ್ನು ಸ್ಮರಿಸುತ್ತಾ ಖಂಡೇಲ್ಕರ್ ಮಲಗಿದನು. ಸ್ವಪ್ನದಲ್ಲಿ ರಾಯರು ದರ್ಶನವಿತ್ತರು. ನಾಲಗೆಯ ಮೇಲೆ ಅಕ್ಷರಗಳನ್ನು ಬರೆದು ಆಶೀರ್ವದಿಸಿ ಅದೃಶ್ಯರಾದರು.

ಮರುದಿನ ಖಂಡೇಲ್ಕರ್ ನಿತ್ಯದಂತೆ ಸ್ನಾನಮಾಡಿ, ಮಡಿಯನ್ನುಟ್ಟು ಪೂಜಾಮಂದಿರವನ್ನು ಸೇರಿದನು. ಗುರುರಾಜರಿಗೆ ವಂದಿಸಿ ಕುಳಿತುಕೊಂಡನು. ಹಠಾತ್ತಾಗಿ ಮಾತು ಬಂದಿತು ! ಹಿಂದಿನಂತೆ ಮಾತನಾಡಲು ಶಕ್ತಿಬರಲು ಆಶ್ಚರ್ಯಾನಂದಭರಿತನಾದನು ! ಗುರುರಾಜರ ಮಹಿಮೆಯನ್ನು ಕೊಂಡಾಡಿದನು. ಪೂಜೆಯನ್ನು ಮುಗಿಸಿ, ಮಿತ್ರರಾದ ಪಪ್ಪುಅವರನ್ನೂ ಕಂಡುಮಾತಾಡಿ ವಿಷಯ ಗಳನ್ನು ವಿವರಿಸಿದನು. ಮೂರುವರ್ಷಗಳಿಂದ ಮೂಕನಾದ ಪ್ರಾಣಸ್ನೇಹಿತನಿಗೆ ಮತ್ತೆ ಮಾತು ಬಂದಿದ್ದು ನೋಡಿ ಪಪ್ಪುಗೆ ಹಿಡಿಯಲಾರದಷ್ಟು ಆನಂದ ವಾಯಿತು !

ಮರುದಿವಸ ಖಂಡೇಲ್ಕರ್ ಪಪ್ಪುಅವರ ಮನೆಯಲ್ಲಿ ಶ್ರೀ ರಾಯರಿಗೆ ಹಸ್ತೋದಕದ ಏರ್ಪಾಟು ಮಾಡಿಸಿ, ಬ್ರಾಹ್ಮಣ ಸುವಾಸಿನಿಯರಿಗೆ ಸಂತರ್ಪಣೆ ಮಾಡಿದನು ! ಕೋರಿಕೆಗಳು ಸಫಲವಾದಾಗ ಕಷ್ಟಗಳು ಪರಿಹಾರವಾದಾಗ ಶ್ರೀಮಂತರು ದಾನ ಧರ್ಮಗಳನ್ನು ಮಾಡುವುದು ಸಹಜವಲ್ಲವೇ ?

### ಗುರ್ವನುಗ್ರಹದಿಂದ ಮೂಕನು ಮಾತಾಡಿದನು !

## ಸರ್ಪದಷ್ಟವಾದ ವೃಷಭವೂ ಬದುಕಿತು !

ಹುಬ್ಬಳ್ಳಿಯಲ್ಲಿ ಗೊಬ್ಬರದ ಕಂಪೆನೀ ಯಜಮಾನರಾದ ಕೆಂಭಾವೆ ಯವರು ಶ್ರೀ ಗುರುರಾಜರ ಭಕ್ತರು. ಪ್ರತಿವರ್ಷವು ಮಂತ್ರಾಲಯಕ್ಕೆ ಹೋಗುವುದು, ರಾಯರ ಸೇವೆ ಮಾಡುವುದು, ಮರಳಿ ಬಂದು ತನ್ನ ಹೆಂಡತಿಗೆ ಶ್ರೀ ರಾಯರ ಮಹಿಮೆಯನ್ನು ತಿಳಿಸುವುದು ಪದ್ಧತಿಯಾಯಿತು.

ಕೆಂಭಾವೆಯವರ ಮನೆಯಲ್ಲಿ ಸಹಸ್ರ ರೂಪಾಯಿಗಳ ಬೆಲೆಬಾಳುವ ಎತ್ತು ಇದ್ದಿತು. ಅದನ್ನು ಒಂದು ದಿನ ಹಾವುಕಚ್ಚಿತು. ಕೆಂಭಾವೆಯವರು ಮನೆಯಲ್ಲಿರಲಿಲ್ಲ. ಶ್ರೀಮತಿ ಕೆಂಭಾವೆಯವರು ತಕ್ಷಣ, ಕೈಕಾಲು ತೊಳೆದು ಕೊಂಡು ಮನೆಯಲ್ಲಿದ್ದ ರಾಯರ ಮೂಲಮೃತ್ತಿಕೆಯನ್ನು ನೀರಿನಲ್ಲಿ ಕಲಿಸಿ.

ಶ್ರೀ ರಾಘವೇಂದ್ರರು ಮಹಾತ್ಮರಾದರೆ ಎತ್ತು ಬದುಕಲಿ ! ಎಂದು ನುಡಿದು ಬಲವಂತವಾಗಿ ಆ ಎತ್ತಿಗೆ ಮೃತ್ತಿಕಾಜಲವನ್ನು ಕುಡಿಸಿದರು. ಆ ಸಮಯಕ್ಕೆ ಶ್ರೀಮಂತರಾದ ಕೆಂಭಾವೆಯವರ ಮನೆಗೆ ಪಶುಗಳ ವೈದ್ಯರೂ ಬಂದರು. ಎತ್ತನ್ನು ಪರೀಕ್ಷೆಮಾಡಿದರು. ಪ್ರಾಣಾಪಾಯವಿಲ್ಲವೆಂದು ಹೇಳಿದರು. ಮೃತ್ತಿಕಾಜಲದ ವಿಷಯವನ್ನು ಕೇಳಿ ಆಶ್ಚರ್ಯಪಟ್ಟರು.

ಕೆಂಭಾವೆಯವರು ಮನೆಗೆ ಬಂದು ಜರುಗಿದ ವಿಷಯವನ್ನು ಕೇಳಿ, ತಮ್ಮ ಶ್ರೀಮತಿಯವರಿಗೂ ಗುರುರಾಜರಲ್ಲಿ ಭಕ್ತಿವಿಶ್ವಾಸಗಳಿರುವುದು ತಿಳಿದು, ಸಮಯ

ಸ್ಫೂರ್ತಿಗೆ ಸಂತಸಪಟ್ಟರು. ಅಂದಿನಿಂದ ಶ್ರೀಮತಿ ಕೆಂಭಾವೆಯುವರು ಶ್ರೀ ಗುರುರಾಜರ ಅಂತರಂಗ ಭಕ್ತರಲ್ಲಿ ಒಬ್ಬರಾದರು ! ತುಂಬಾ ಬೆಲೆಬಾಳುವ ಎತ್ತು ಗುರುರಾಜರ ಮೃತ್ತಿಕಾಜಲದಿಂದ ಬದುಕಿತು ! ಇದು 1950ರಲ್ಲಿ ಜರುಗಿದ ಘಟನೆ !

## ಗುರುನಿಂದೆ ಮಹಾಪಾಪ

ಗತಶತಾಬ್ದದಲ್ಲಿ ಕೊಲ್ಲೂರು ಭೀಮಾಚಾರ್ಯರೆಂಬ ದೊಡ್ಡ ಪಂಡಿತರಿದ್ದರು. ಆತನಿಗೆ ಪಾಂಡಿತ್ಯಕ್ಕಿಂತಲೂ ಶಾಠ್ಯಹೆಚ್ಚು. ಆಚಾರ್ಯನು ಮಂತ್ರಾಲಯಕ್ಕೆ ಬಂದನು. ಗುರುರಾಜರ ದರ್ಶನ ಪಡೆದು ಪ್ರದಕ್ಷಿಣೆ ನಮಸ್ಕಾರ ಹಾಕುತ್ತಿರುವಾಗ ಅಲ್ಲಿ ಮಠದ ಪಂಡಿತರು ಶಿಷ್ಯರಿಗೆ ಸುಧಾ ಪಾಠವನ್ನು ಹೇಳುತ್ತಿರುವುದನ್ನು ಕಂಡು ನಿಂತುಕೇಳಿದರು. ಅರ್ಥವಿವರಣೆ ತಪ್ಪಾಗಿದೆ ಎಂದು ಆ ಪಂಡಿತರನ್ನಾಕ್ಷೇಪಿಸಿದರು ಭೀಮಾಚಾರ್ಯರು. ಆ ವಿದ್ವಾಂಸರು ತಾವು ಅರ್ಥವನ್ನು ಸ್ವಂತಬುದ್ಧಿಗೆ ತಿಳಿದಂತೆ ಹೇಳುತ್ತಿಲ್ಲವೆಂದು, ಅದು ಪರಿಮಳವನ್ನೆ ಆಧಾರವಾಗಿಟ್ಟುಕೊಂಡು ಪರಿಮಳಾಚಾರ್ಯರ ಅಭಿಪ್ರಾಯವನ್ನೆ ಹೇಳಿದೆವೆಂದು ವಿನಯಶೀಲರಾಗಿ ತಿಳಿಸಿದರು. ಅಹಂಕಾರಮದದಿಂದ ಭೀಮಾಚಾರ್ಯರು, **ಪರಿಮಳಾಚಾರ್ಯರಿಗೇಕೆ ಅಜ್ಞಾನವಿರಬಾರದೆಂದು,** ನುಡಿದರು. ಅಲ್ಲಿದ್ದವರೆಲ್ಲ '**ಶಾಂತಂ ಪಾಪಂ**' ಎನ್ನುತ್ತಾ ಗುರುನಿಂದೆಯನ್ನು ಕೇಳಲಾರದೆ ಕಿವಿಮುಚ್ಚಿಕೊಂಡರು.

ಮರುದಿನ ಭೀಮಾಚಾರ್ಯನು ಪ್ರಯಾಣವಾಗಿ **ಗಾರ್ಲದಿನ್ನೆ** ಎಂಬ ಹಳ್ಳಿಯನ್ನು ಸೇರಿದನು. ಅಲ್ಲಿಯ ಶ್ಯಾನಭೋಗರಿಗೆ ಇವರ ಬರುವಿಕೆಯ ಬಗ್ಗೆ ಸ್ವಪ್ನವಾಗಿತ್ತು. ಆಚಾರ್ಯರನ್ನು ಆದರದಿಂದ ಕರೆದುಕೊಂಡು ಬಂದು ಮೃಷ್ಟಾನ್ನಭೋಜನಮಾಡಿಸಿ ನಮಸ್ಕರಿಸಿ,

"ಆಚಾರ್ಯಾ ! ತಾವು ಮಹಾತ್ಮರಿದ್ದೀರಿ ಭೃಗಾಂಶ ಸಂಭೂತರೆಂಬುದಾಗಿ ಶ್ರೀ ಗುರುರಾಜರೆನಗೆ ಸ್ವಪ್ನದಲ್ಲಿ ತಿಳಿಸಿ ತಮ್ಮನ್ನು ಚಿತರೀತಸತ್ಕರಿಸಲು ಅಪ್ಪಣೆ ಯಿತ್ತರು. ನಾನು ಧನ್ಯನಾದೆ" ನೆಂದು ನುಡಿದನು.

ಭೀಮಾಚಾರ್ಯರು ಗಾರ್ಲದಿನ್ನೆ ಇಹ ಹೊರಟು ಮಾನ್ವಿಯನ್ನು ಸೇರಿದರು. ತಮ್ಮ ನಿಜಾಂಶವು ಬಯಲಾದುದಕೆ ಚಿಂತಿಸಿ ಅಲ್ಲೆ ದೇಹತ್ಯಾಗಮಾಡಿದರು. ಅವರಿಗೆ ಪಿಶಾಚಜನ್ಮವು ಪ್ರಾಪ್ತವಾಯಿತು !

ಸುಧಾಪಂಡಿತರಾದ ಭೀಮಾಚಾರ್ಯರು ಗುರುನಿಂದೆಯ ಫಲವಾಗಿ ಪಿಶಾಚಜನ್ಮವನ್ನು ತಾಳಿದರು. ಒಂದು ವೃಕ್ಷದ ಮೇಲೆ ವಾಸಮಾಡಬೇಕಾಯಿತು ! ಆಚಾರ್ಯರಿಗೆ ಪಿಶಾಚಜನ್ಮವು ಬಂದಿದ್ದು ವಿದ್ಯಾಗುರುಗಳಿಗೆ ತಿಳಿಯಿತು. ಅವರು ಶಿಷ್ಯನನ್ನು ಅಹಂಕಾರಕ್ಕೆ ದಂಡಿಸಿ, ಶ್ರೀ ಗುರುಸಾರ್ವಭೌಮರನ್ನೆ ಆಶ್ರಯಿಸಿದರು ಗುರುಸ್ತೋತ್ರದಿಂದ ಅಭಿಮಂತ್ರಿತಜಲವನ್ನು ಪಿಶಾಚಿಯ ಮೇಲೆ ಎರಚಿದರು. ಆಚಾರ್ಯರಿಗೆ ಪಿಶಾಚಜನ್ಮವು ನಿವೃತ್ತಿಯಾಯಿತು ! ಆಶ್ರಯಿಸಿದ್ದ ವೃಕ್ಷವು ಸುಟ್ಟುಭಸ್ಮವಾಯಿತು ! ಗುರುಪಾದೋದಕದಿಂದ ಈಗಲೂ ಪಿಶಾಚಾದಿ ಬಾಧಾ ನಿವೃತ್ತಿಯಾಗುತ್ತಿರುವುದನ್ನು ನಾವು ಮೇಲಿಂದಮೇಲೆ ಕೇಳುತ್ತಲಿದ್ದೇವೆ. ಕಂಡಿದ್ದೇವೆ !

## ನಾಸ್ತಿಕನಿಗೂ ದೇವರಲ್ಲಿ ನಂಬಿಕೆ !

**ರಾಜಾರಾಮ್ ಕಮಲಾಕರ್ ಜೋಶಿ** M.A.L.L.B. ಸೊಲ್ಲಾಪುರನಿವಾಸಿ. ನಾಸ್ತಿಕ. 1939ರಲ್ಲಿ ಸತ್ಕಾರಸಮಾರಂಭದಲ್ಲಿ ಹಬ್ಬದ ಊಟವನ್ನು ಮಾಡಿದನು. ಹಿಂದೆಯೇ ವಾಂತಿಗಳಾದುವು. ಅಂದಿನಿಂದ ಜೋಷಿಯವರು ತಿಂದದ್ದೆಲ್ಲ, ಕುಡಿದದ್ದೆಲ್ಲವೂ ವಾಂತಿಯಾಯಿತು ! ನಿಪುಣರಾದ ವೈದ್ಯರು ಚಿಕಿತ್ಸೆ ನಡೆಸಿದರು. ಪ್ರಯೋಜನವಾಗಲಿಲ್ಲ. ವೈದ್ಯರು ಕೈಬಿಟ್ಟರು. ತಾಯ್ತಂದೆಗಳಿಗೆ ಮಗನ ದುರವಸ್ಥೆಯನ್ನು ನೋಡಿ ಸಂಕಟವಾಯಿತು ! ಸಹಜವಾದುದೇಸರಿ. ಆದರೆ ಅದನ್ನು ಪರಿಹರಿಸಲು ಶಕ್ತರಿಲ್ಲ. ಸಾಧ್ಯವಿಲ್ಲ. ಹೀಗಿರಲು ಜೋಷಿಯ ಮಿತ್ರರಲ್ಲಿ ಶ್ರೀ ಗುರುರಾಜರ ಭಕ್ತರೊಬ್ಬರು ರಾಯರ ಮಹಿಮೆಯನ್ನು ಹೇಳಿ, ಅವರೇ ಕಾಪಾಡಬೇಕು ! ಮಾನವಮಾತ್ರರಿಂದ ಸಾಧ್ಯವಾಗದ ಮಾತು ! ಎಂಬುದಾಗಿ ಹಿತನುಡಿಯನ್ನು ನುಡಿದು ಕರ್ತವ್ಯವನ್ನು ಬೋಧಿಸಿದ್ದರು.

ಪೂಜ್ಯಾಯ ರಾಘವೇಂದ್ರಾಯ
ಸತ್ಯಧರ್ಮ ರತಾಯಚ
ಭಜತಾಂ ಕಲ್ಪವೃಕ್ಷಾಯ
ನಮತಾಂ ಕಾಮಧೇನವೇ

ಎಂಬ ಮಂತ್ರವನ್ನು ಭಕ್ತಿಯಿಂದ ಪಠಣೆಮಾಡಿದರೆ ೨೧ನೇ ದಿನ ಸ್ವಪ್ನವಾಗುವುದು. ಶ್ರೀಗಳವರು ಬಾಲಕನಿಗೆ ಕಾಲುಗಳನ್ನು ಪ್ರಸಾದಿಸುವರು"

ಪೀಠಸ್ಥರಾಗಿದ್ದ **ಶ್ರೀ ಸುಯಮೀಂದ್ರತೀರ್ಥರು** ಸಂಚಾರದಲ್ಲಿ ಭದ್ರಾವತಿಗೆ ಬಂದರು. ರಂಗಾಚಾರ್ಯರು ಶ್ರೀಗಳವರನ್ನು ಮನೆಗೆ ಆಹ್ವಾನಿಸಿ, ಭಿಕ್ಷೆಮಾಡಿಸಿ, ಅವರ ಅಪ್ಪಣೆ ಪಡೆದು, ಫಲಮಂತ್ರಾಕ್ಷತೆಗಳನ್ನು ಸ್ವೀಕರಿಸಿ ಮಗನೊಂದಿಗೆ ಮಂತ್ರಾಲಯಕ್ಕೆ ಹೊರಟರು.

ಮಗನಿಗೆ ಕಾಲಿಲ್ಲ. ಆದಕ್ಕಾಗಿಯೇ ಮಂತ್ರಾಲಯಕ್ಕೆ ಬಂದರು. ರಂಗಾಚಾರ್ಯರು ಮಗನಿಗಾಗಿ ರಾಯರ ಸೇವೆಯನ್ನು ಭಕ್ತಿಪುರಸ್ಸರವಾಗಿ ಮಾಡಿದರು. ೨೧ ದಿನಗಳುರುಳಿದವು. ಗುರುರಾಜರು ಪ್ರಸನ್ನರಾದರು. ಬಾಲಕನನ್ನು ತಮ್ಮ ಅಮೃತಹಸ್ತದಿಂದ ಸ್ಪರ್ಶಮಾಡಿದರು. ಅದೃಶ್ಯರಾದರು. ಬೆಳಿಗ್ಗೆ ರಂಗಾಚಾರ್ಯನ ಮಗನು ಮೆಲ್ಲನೆ ನಡೆಯಲು ಪ್ರಯತ್ನಿಸಿ, ಎರಡು ದಿನಗಳಲ್ಲಿ ಯಾವ ಸಹಾಯವನ್ನಪೇಕ್ಷಿಸದೆ ಇತರರಂತೆ ನಡೆದನು. ಆಚಾರ್ಯರಿಗೆ ಮಗನು ನಡೆದದ್ದನ್ನು ನೋಡಿ ಮಹದಾನಂದವಾಯಿತು ! ಸಹಜವಲ್ಲವೆ ? ಅನಂತರ ಗುರುವಾರ ಶ್ರೀ ಗುರುರಾಜರಿಗೆ ಹಸ್ತೋದಕವನ್ನು ಕೊಟ್ಟು ಪ್ರಸಾದವನ್ನು ತೆಗೆದುಕೊಂಡು ಮಗನನ್ನು ಕರೆದುಕೊಂಡು ಭದ್ರಾವತಿಗೆ ಹಿಂದಿರುಗಿದನು !

## ಪ್ರತ್ಯಕ್ಷ ದರ್ಶನ

ಮೈಸೂರು ರಾಷ್ಟ್ರದಲ್ಲಿ ಚನ್ನಪಟ್ಟಣಕ್ಕೆ ಸಮೀಪದಲ್ಲಿರುವ ಸಂಕಲಗೆರೆ ಎಂಬ ಹಳ್ಳಿಯಲ್ಲಿ ರಾಮಾಶಾಸ್ತ್ರಿ ಎಂಬ ಯುವಕನಿದ್ದನು. ಆತನ ಚಿಕ್ಕಪ್ಪನು

ದತ್ತಾತ್ರೇಯೋಪಾಸಕನು ಹಾಗೂ ಅವಧೂತನಿದ್ದನು. ಆತನು ಕೊಟ್ಟ ಪ್ರಸಾದವನ್ನು ಭುಂಜಿಸಿ ರಾಮಾಶಾಸ್ತ್ರಿ ಮೂಕನಾದನು. ಕೆಲಕಾಲ ಕಳೆಯಿತು. ಯೋಗಾನಂದ್ ಎಂಬ ಡಾಕ್ಟರು, ಭವರೋಗ ವೈದ್ಯರಾದ ಶ್ರೀ ಗುರುರಾಘ ವೇಂದ್ರರನ್ನಾಶ್ರಯಿಸಿದರೆ ಮೂಕನು ಮಾತಾಡಬಲ್ಲನು. ಆದೊಂದೆ ಮಾರ್ಗವೆಂಬುದಾಗಿ ತಿಳಿಸಿದರು. ಒಂದು ವರ್ಷಕಳೆಯಿತು.

ರಾಮಾಶಾಸ್ತ್ರಿಗೆ ಮೂಕತ್ವವು ಮರಣಕ್ಕಿಂತಲೂ ಹೆಚ್ಚುನೋವನ್ನುಂಟು ಮಾಡಿತು ! ಕೊನೆಯ ಪ್ರಯತ್ನವನ್ನು ಮಾಡಿಮುಗಿಸಲು ಸಿದ್ಧನಾದ. 1950ರಲ್ಲಿ ಮಂತ್ರಾಲಯಕ್ಕೆ ಪ್ರಯಾಣವಾದನು. ಗುರುರಾಜರ ದರ್ಶನ ಪಡೆದನು. ಶ್ರದ್ಧಾಭಕ್ತಿಗಳಿಂದ ನಿಷ್ಠೆಯಿಂದ ರಾಯರ ಸೇವೆಮಾಡಿದನು. ಆತನು ಸೇವೆಮಾಡುತ್ತಿರುವ ಕಾಲದಲ್ಲೆ ಅನೇಕ ಭಕ್ತರು ತಮಗೆ ಪ್ರಸನ್ನ ರಾದರೆಂಬುದಾಗಿ ತಿಳಿಸಿ, ತಮ್ಮ ಸೇವೆಯನ್ನು ಮುಗಿಸಿ ತಮ್ಮ ಗ್ರಾಮಗಳಿಗೆ ಹಿಂದಿರುಗಿದರು. ಇದನ್ನು ಕಂಡು, ಶಾಸ್ತ್ರಿಗಳಿಗೆ ಬೇಸರವಾಯಿತು. ಗುರುರಾಜರು ತನ್ನಪಾಲಿಗೆ ಬರಲಿಲ್ಲವೆಂಬ ಸಂಕಟದಿಂದ ಮರುಗಿದನು. ತುಂಗಭದ್ರೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಲು ನಿಶ್ಚಯಿಸಿದನು.

ಮರುದಿನ ಶಾಸ್ತ್ರಿಯು ತುಂಗಭದ್ರೆಯಲ್ಲಿ ಮಿಂದು ಬಂದು ರಾಯರ ಮುಂದೆ ಕೈಜೋಡಿಸಿ ನಿಂತನು. ಕಣ್ಣಲಿ ಶೋಕಭಾಷ್ಪಗಳುದುರಿದವು. ಗುರುರಾಜರ ಸಾಲಂಕೃತ ಬೃಂದಾವನವನ್ನು ತದೇಕದೃಷ್ಟಿಯಿಂದ ನೋಡುತ್ತ ನಿಂತನು. ಬೃಂದಾವನದಿಂದ ಜ್ಯೋತಿಬೆಳಗಿತು. ರಾಯರು ರತ್ನಮಯ ಸಿಂಹಾಸನದಲ್ಲಿ ಆಸೀನರಾಗಿದ್ದಾರೆ ! ದಂಡಕಮಂಡಲಗಳನ್ನು ಹಿಡಿದಿದ್ದಾರೆ ! ಒಂದು ಕೈಯಲ್ಲಿ ಖಡ್ಗವಿದೆ. ಕಂಠದಲ್ಲಿ ರತ್ನಾಭರಣಗಳು. ತಲೆಯ ಮೇಲೆ ಕಾವಿಶಾಟಿ. ಅದರ ಮೇಲೆ ಮಣಿಮಯವಾದ ಬಂಗಾರದ ಕಿರೀಟ. ರಾಜಚಿಹ್ನೆಗಳಿಂದ ರಾರಾಜಿಸುವ ಯತಿರಾಜರನ್ನು ಕಂಡನು. ರಾಯರಿಗೆ ತುಂಬುಯೌವನ. ಸುವರ್ಣವರ್ಣದ ದೇಹ ! ಸಾತ್ವಿಕ ತೇಜಸ್ಸು. ಪ್ರಸನ್ನವದನ. ಗುರುಸಾರ್ವಭೌಮರು ಬೃಂದಾವನದಿಂದ ರಾಮಾಶಾಸ್ತ್ರಿಗೆ

ಶ್ರೀ ಪ್ರಹ್ಲಾದರಾಜರು ಹಾಗು ಗುರುರಾಜರ ರೂಪದಲ್ಲಿ ದರ್ಶನವಿತ್ತು ಅನುಗ್ರಹಿಸಿದರು. ಶಾಸ್ತ್ರಿ ಪುಲಕಿತಗಾತ್ರನಾದನು. ಎಲ್ಲರೂ ಕೇಳುವಂತೆ "**ಗುರುರಾಜಾ**" ಎಂದು ಕೂಗಿದನು. ಬದಿಯಲ್ಲಿದ್ದವರೆಲ್ಲರು ಮೂಕನು ಮಾತನಾಡಿದ್ದು ಕೇಳಿ ಸಂಭ್ರಮಾಶ್ಚರ್ಯದಿಂದ ಗುರುಮಹಿಮೆಯನ್ನು ಕೊಂಡಾಡಿದರು. ಗುರುಸಾರ್ವಭೌಮರು ಬೃಂದಾವನಸ್ಥರಾದ ಮೇಲೆ ಮೂರನೇ ಶತಾಬ್ದಿಯಲ್ಲಿ ಭಕ್ತರಿಗೆ ಪ್ರತ್ಯಕ್ಷದರ್ಶನ, ಫಲಮಂತ್ರಾಕ್ಷತೆಗಳನ್ನಿತ್ತು ಅನುಗ್ರಹಿಸುತ್ತಿರುವ ರಾಯರ ಮಹಿಮೆ ಏನೆಂದು ವರ್ಣಿಸೋಣ! ರಾಮಾಶಾಸ್ತ್ರಿಯು ಧನ್ಯನು. ನಿಜವಾಗಿಯು ಭಾಗ್ಯಶಾಲಿ! ಗುರುರಾಜರ ಪ್ರತ್ಯಕ್ಷದರ್ಶನ ಕೋಟಿಗೊಬ್ಬರಿಗೂ ದೊರೆಯುವುದು ಅಪರೂಪ.

ಬೆಂಗಳೂರಿನಲ್ಲಿ, ಶ್ರೀರಾಂಪುರನಿವಾಸಿಗಳಾದ, ವಿದ್ಯುಚ್ಛಕ್ತಿಮಂಡಳಿಯಲ್ಲಿ ಉದ್ಯೋಗದಲ್ಲಿರುವ ಸನ್ಮಿತ್ರರಾದ ಮಧ್ವಶಾಸ್ತ್ರ ಸಂಪನ್ನರಾದ ಶ್ರೀ ಭೀಮಸೇನ ವಿಶ್ವಾಮಿತ್ರರಿಗೆ ಶ್ರೀ ರಾಯರು ಪ್ರತ್ಯಕ್ಷದರ್ಶನವನ್ನನುಗ್ರಹಿಸಿರುತ್ತಾರೆ. ಇದು ಈಚೆಗೆನಡೆದ ಘಟನೆ! ಇವರೀಗ ಶಿವಮೊಗ್ಗಾದಲ್ಲಿರುತ್ತಾರೆ!

## ಗುರುರಾಜರ ಘಂಟೆ ರಿಪೇರಿಯಾಯಿತು!

ಕಾಮಧೇನು ಕಲ್ಪವೃಕ್ಷಗಳಂತೆ ಭಕ್ತಾಭೀಷ್ಟಪ್ರದರಾದ ಶ್ರೀ ಗುರುಸಾರ್ವಭೌಮರು, ಭಕ್ತರಿಂದ, ವಿಧವಿಧವಾದ ಸೇವೆಯನ್ನು ಸ್ವೀಕರಿಸುತ್ತಾರೆ! ಕೆಲವರಿಂದ ಸಾವಿರಾರು ರೂಪಾಯಿಗಳ ಖರ್ಚಿನಬಾಬತು ಸೇವೆ ಕೆಲವರಿಂದ ಹತ್ತಾರನ್ನೆಬಯಸಿ ಸ್ವೀಕರಿಸುತ್ತಾರೆ! ಇದೊಂದು ಸೋಜಿಗದ ವಿಷಯ ಶ್ರೀ ಗುರುರಾಜರ ಘಂಟೆಯು ಒಡೆದು ರಿಪೇರಿಯಾಗಬೇಕಾಗಿದ್ದಿತು! ರಾಯರ ಅರ್ಚಕರಿದನ್ನು ಪೀಠಸ್ಥರಾದ ಶ್ರೀ ಸುಜಯೀಂದ್ರರಿಗೆ ತಿಳಿಸಿದರು. ಆಗಲಿ ಮಾಡಿಸೋಣವೆಂದರು. ಹೀಗೆ ಕೆಲದಿನಗಳುರುಳಿದವು.

ವಿಜಯವಾಡದಲ್ಲಿರುವ ಉಡುಪಿ ಲಂಚ್ ಹೋಂ ಮಾಲಕರಾದ ಶ್ರೀ ಯಂ. ಕೃಷ್ಣಭಟ್ಟರಿಂದ ಮಂತ್ರಾಲಯದ ಬೃಂದಾವನಂ ಆಫೀಸಿಗೆ ಮನಿಯಾರ್ಡರು ಬಂದಿತು, ಅದರ ಕೂಪನಿನಲ್ಲಿ ಹೀಗೆ ಬರೆದಿದೆ!

"ಈದಿನ ಬೆಳಗಿನ ಝಾವ 5 ಗಂಟೆಗೆ ಸ್ವಪ್ನವಾಯಿತು. ಶ್ರೀ ಗುರುಸಾರ್ವಭೌಮರು ದರ್ಶನವಿತ್ತು" ನನ್ನ ಪೂಜಾಸಾಮಗ್ರಿ ಯೊಂದು ಮುರುದಿದೆ. ರಿಪೇರಿಯಾಗಲು ರೂ 15-ಬೇಕಾಗುವುದು ಕಳಿಸಬೇಕೆಂದು ಸ್ವಪ್ನದಲ್ಲಿ ಸೂಚಿಸಿದರು.

ಗುರುರಾಜರ ಅಪ್ಪಣೆಯಂತೆ ಈದಿವ್ಸ ಹದಿನೈದು ರೂಪಾಯಿಗಳನ್ನು M.O. ಮೂಲಕ ಕಳಿಸೀನಿ. ಸ್ವೀಕರಿಸಬೇಕು ! ಮುರಿದುಹೋದ ಸಾಮಗ್ರಿ ಯಾವುದೆಂಬುದನ್ನು ತಿಳಿಸಬೇಕಾಗಿ ಪ್ರಾರ್ಥನೆ !

27-7-68 ಯಂ. ಕೃಷ್ಣಭಟ್ಟ.

ವಿಜಯವಾಡ

ಮನಿಯಾರ್ಡರು ಬಂದಿತು. ಯಾವ ಸಾಮಗ್ರಿ ರಿಪೇರಿಯಾಗಬೇಕೆಂಬುದು ಮಠದ ಶಿಬ್ಬಂದಿಗೆ ತಿಳಿಯದು. ಆ ಹಣವನ್ನು ಅಮಾನತ್ತಿನಲ್ಲಿಟ್ಟರು. ಶ್ರೀಗಳವರಿಗೆ ತಿಳಿಸಿದರು. ಅನಂತರ ರಾಯರ ಅರ್ಚಕರು ಬಂದು ಘಂಟೆಯು ರಿಪೇರಿ ವಿಷಯ ವಿಜ್ಞಾಪಿಸಿ ಜ್ಞಾಪಕಮಾಡಿದರು. ಶ್ರೀಗಳವರಾಗ ಅಕ್ಕಸಾಲಿಗರ ವನನ್ನು ಕರೆಸಿ ವಿಚಾರಿಸಲು ಘಂಟೆಗೆ ೧೨ ರೂಪಾಯಿ ಬೆಳ್ಳಿಯನ್ನು ಹಾಕ ಬೇಕೆಂದು 3 ರೂಪಾಯಿ ಕೂಲಿಯಾಗುತ್ತದೆಂದು ತಿಳಿಸಿದನು. ಆಗ ವಿಜಯವಾಡದಿಂದ ಬಂದ ಮನಿಯಾರ್ಡರು ಹಣವು ಘಂಟೆ ರಿಪೇರಿಗೆಂಬುದಾಗಿ ತಿಳಿಯಿತು ! ಘಂಟೆರಿಪೇರಿಯಾಯಿತು !

ಅಪೇಕ್ಷಿತಪ್ರದಾತರಾದ ಶ್ರೀ ಗುರುರಾಜರು ಹೋಟಲು ಮಾಲಕನಿಂದ ಕೇವಲ ಹದಿನೈದುರೂಪಾಯಿಗಳ ಸೇವೆಯನ್ನು ಮಾತ್ರ ಸ್ವೀಕರಿಸಿದುದು ಸೋಜಿಗವಲ್ಲವೆ ! ರಾಯರು ಪೀಠಸ್ಥರಾದಾಗ ಆದವಾನಿ ನವಾಬನಾದ ಅಬ್ದುಲ್ಲಾಖಾನ್ ರಾಯರ ಮಹಿಮೆಗೆ ಬೆರಗಾಗಿ, ದೊಡ್ಡ ದೊಡ್ಡ ಗ್ರಾಮಗಳನ್ನೇ ಜಹಗೀರಾಗಿ ಕೊಡಲು ಮುಂದೆ ಬಂದ. ಆದರೆ ರಾಯರು ತಮಗೆ ಚಿಕ್ಕಹಳ್ಳಿಯಾದ **ಮಂಚಾಲೆ** ಮಾತ್ರ ಸಾಕೆಂದರು ! ಯಾರಲ್ಲಿ ಎಷ್ಟು ಕೃಪೆಮಾಡಬೇಕೊ ಅಷ್ಟೆ ಅಲ್ಪಸೇವೆಯನ್ನ ರಾಯರು ಸ್ವೀಕರಿಸುತ್ತಾರೆ ! ಬೆಳ್ಳಿಯ ಘಂಟೆಯನ್ನೆ ಕೊಡಿಸಬಲ್ಲ ಕೃಷ್ಣಭಟ್ಟರಲ್ಲಿ ಕೇವಲ ರಿಪೇರಿ ಖರ್ಚಿನ ಹಣವನ್ನಷ್ಟೆ ಸ್ವೀಕರಿಸಿದರು.

## ಖೋತಾ ಬಜೆಟ್

ಶ್ರೀ ಗುರುರಾಜರ ಬೃಂದಾವನಕ್ಕೆ ಪ್ರತಿ ಆರಾಧನೆಯ ಕಾಲದಲ್ಲೂ ೧೨೫೦ ರೂಪಾಯಿಗಳ ಬೆಲೆಬಾಳುವ ಪೀತಾಂಬರಗಳನ್ನು ಮಂಜೂರು ಮಾಡುವುದು ರೂಢಿಯಲ್ಲಿದೆ. ಆದರೆ 1969ರಲ್ಲಿ ಆ ಬಾಬಿನಲ್ಲಿ ಶ್ರೀ ೬೦೦ ಮಾತ್ರ ಮಂಜೂರು ಮಾಡಿದುದರಿಂದ ರೂ. ೬೫೦ ಕಡಿಮೆಯಾಯಿತು !

ಗುರುರಾಜರು ಖೋತಾ ಬಜೆಟ್ ವಿಷಯವಾಗಿ ಆರು ತಿಂಗಳು ಮುಂಚಿತವಾಗಿಯೆ ಶಿವಮೊಗ್ಗದಲ್ಲಿ ಭಕ್ತನಿಗೆ ಸ್ವಪ್ನದಲ್ಲಿ ದರ್ಶನವಿತ್ತು ಮಾಮೂಲು ಪೀತಾಂಬರಗಳನ್ನು ಸಿದ್ಧಪಡಿಸಬೇಕಾಗಿ ಸೂಚಿಸಿದರು. ಆತನು ಶ್ರೀ ಎಳಂದೂರು ನರಿಸಿಂಗರಾಯರಲ್ಲಿಗೆ ಹೋಗಿ ರಾಯರಿಗೆ ಎರಡು ಪೀತಾಂಬರಗಳನ್ನು ಸಿದ್ಧಪಡಿಸಿದನು. ಬಜೆಟ್‌ನಲ್ಲಿ ಕಡಿಮೆ ಮಾಡಿದ ಶ್ರೀ ೬೫೦ ರೂಪಾಯಿಗಳ ಸೇವೆಯನ್ನು ಆ ಭಕ್ತನಿಂದ ಅಪೇಕ್ಷಿಸಿ ಸ್ವೀಕರಿಸಿದರು !

1968ರಲ್ಲಿ ನಾನು ಶ್ರೀ ರಾಯರ ದರ್ಶನಕ್ಕೆ ಮಂತ್ರಾಲಯಕ್ಕೆ ಹೋದಾಗ ಘಂಟೆಯ ರಿಪೇರಿ ಹಾಗೂ ಖೋತಾ ಬಜೆಟ ವಿಷಯ ವಿವರಗಳು ಶ್ರೀ ಮಠದಿಂದ ತಿಳಿದುಕೊಂಡೆ, ಗುರುಚರಿತ್ರೆ ತೆಲುಗು ಪುಸ್ತಕದಲ್ಲಿ ಸೇರಿಸಿ ಮುದ್ರಿಸಿದೆ ! ಹೀಗೆ ಗುರುರಾಜರ ಮಹಿಮೆಗಳು ಪ್ರತಿ ಸಲ ಮಂತ್ರಾಲಯಕ್ಕೆ ಹೋದಾಗ ಒಂದೊಂದಾಗಿ ತಿಳಿದುಬರುತ್ತವೆ. ರಾಯರು ಬೃಂದಾವನಸ್ಥರಾಗಿ ಮುನ್ನೂರು ವರ್ಷಗಳು ತುಂಬಲಿವೆ. ಇಂತಹ ಮಹಾತ್ಮೆಗಳು ಜರುಗುತ್ತಲಿವೆ. ಎಲ್ಲವನ್ನು ಸಂಗ್ರಹಿಸಿ.

"ಬೃಂದಾವನದಲ್ಲಿ ಶ್ರೀ ಗುರು ಸಾರ್ವಭೌಮರು"

ಎಂಬುದಾಗಿ ಕೃತಿಯನ್ನು ರಚಿಸುವ ಯೋಚನೆಯಿದೆ. ಗುರುರಾಜರ ಭಕ್ತರು ವಿಷಯಗಳನ್ನು ವಿವರವಾಗಿ ಬರೆದು ನನಗೆ ತಿಳಿಸಿದರೆ ಹಾಗೆ ಮಾಡಲು ಸಹಾಯವಾಗುವುದು.

# ಮುರಿದ ಕೈ ಸರಿಹೋಯಿತು !

**ಶ್ರೀ ಹರಿ ಅಚ್ಯುತ ರಾಮಶಾಸ್ತ್ರಿಗಳು**, B.A., ಪ್ರಕೃತ ಮದರಾಸ್ ನಲ್ಲಿ ಚಿತ್ರಸೀಮೆಯಲ್ಲಿ ಸಂಗೀತ ಶಾಖೆಯಲ್ಲಿ ಕೆಲಸ ಮಾಡುತ್ತಲಿದ್ದಾರೆ. ಕೃಷ್ಣಾ ಜಿಲ್ಲೆಯ **ಮಚಲೀಪಟ್ಟಣವು** ಇವರ ಜನ್ಮಸ್ಥಲ. ಉಭಯ ಭಾಷೆಗಳಲ್ಲಿ ಉತ್ತಮ ಕವಿತ್ವವನ್ನು ರಚಿಸುವ, ಗಾಂಧರ್ವ ವಿದ್ಯಾ ವಿಶಾರದರಾದ **ಶ್ರೀಹರಿ ನಾಗಭೂಷಣಮ್** ಇವರ ತಂದೆ. ಸಂಗೀತ ಸಾಹಿತ್ಯಗಳ ಮಿಲನ ಬಹು ಅಪರೂಪ. ಅಷ್ಟೆ ಅಲ್ಲದೆ ನಾಗಭೂಷಣಂ, ಆಂಗ್ಲದಲ್ಲಿ B.A , ಪದವೀಧರರು, ಸುಪ್ರಸಿದ್ಧ ನ್ಯಾಯವಾದಿಗಳು, ಶ್ರೀ ಅಚ್ಯುತ ರಾಮಶಾಸ್ತ್ರಿಗಳಿಗೆ ವಂಶಪಾರಂಪರ್ಯವಾಗಿ ಬಂದ ಗಾಂಧರ್ವ ವಿದ್ಯೆ ಹುಟ್ಟಿನಿಂದಲೇ ಬಂದಿತು !

ಶ್ರೀ ಅಚ್ಯುತ ರಾಮಶಾಸ್ತ್ರಿಗಳು ಚಿತ್ರಸೀಮೆಯಲ್ಲಿ ಕೆಲಸ ಮಾಡುತ್ತಲಿದ್ದಾರೆ ! ಅವರು 22-3-69 ವತೇದಿ ರಾತ್ರಿ ಮನೆಗೆ ಹಿಂತಿರುಗಿ ಬರುವಾಗ Scooter ಮೇಲಿಂದ ಬಿದ್ದರು. ಪೆಟ್ಟಾಯಿತು ! ಕೈ ಮುರಿಯಿತು ! ಫಿಡೇಲು ಬಾರಿಸಲುಬಾರದಂತಾಯಿತು ! ಉದ್ಯೋಗದಲ್ಲಿ ತೊಂದರೆ ಆಗಿ ಜೀವನಕ್ಕೂ ಕಷ್ಟವಾಯಿತು ! ಹೀಗಿರುವಾಗ ಸಹೋದ್ಯೋಗಿಗಳಾದ ಶ್ರೀ ಹನುಮಂತಾಚಾರ್ಯರು (ನಮ್ಮ ಅಣ್ಣನವರು) ಶಾಸ್ತ್ರಿಗಳನ್ನು ಕಂಡು ಗುರುರಾಜರ ಮಹಿಮೆಯನ್ನು ತಿಳಿಸಿ, ನಾನು ರಚಿಸಿದ ಗುರುಚರಿತ್ರೆ-ನಕ್ಷತ್ರಮಾಲಿಕೆ (ತೆಲುಗು ಪ್ರತಿಗಳು) ಕೊಟ್ಟು, ರಾಯರ ಸೇವೆ ಮಾಡಲು ತಿಳಿಸಿದರಂತೆ !

ಮುರಿದ ಎಲುಬಿಗೆ ಚಿಕಿತ್ಸೆ ನಡೆಯಿತು. ಒಂದು ತಿಂಗಳು ವಾಯಿದಾ ಕೊಟ್ಟರು ವೈದ್ಯರು. ನಿಯಮಿತ ಕಾಲಕ್ಕೆ ಸಮುಚಿತವಾಗಿ ಗುಣವಾದರೆ ಗುರುರಾಜರ ಮಹಿಮೆ ನಂಬುವುದಾಗಿ, ಅವರಲ್ಲಿಗೆ ಬಂದು ಅವರ ಸೇವೆ ಮಾಡುವುದಾಗಿ ಸಂಕಲ್ಪ ಮಾಡಿದರು ಶಾಸ್ತ್ರಿಗಳು ! ಗುರುರಾಜರಿಗೆ ಇದೊಂದು ದೊಡ್ಡ ಸಮಸ್ಯೆಯೇ ? —

ಶಾಸ್ತ್ರಿಗಳ ಸಂಕಲ್ಪವು ಫಲಿಸಿತು! ವೈದ್ಯರಿಗೆ ಅಚ್ಚರಿಯಾಯಿತು. ಒಂದು ವಾರ ಮುಂಚಿತವಾಗಿ ಕೈ ಸ್ವಾಧೀನಕ್ಕೆ ಬಂದಿತು! ಶ್ರೀ ಶಾಸ್ತ್ರಿಗಳ ಅಣ್ಣನವರಾದ ಶ್ರೀ ಹನುಮಂಚ್ಛಾಸ್ತ್ರಿಗಳು ವಿಶಾಖಪಟ್ಟಣ ನಿವಾಸಿಗಳು. ಮೊದಲು ಗುಂಟೂರು ನಿವಾಸಿಗಳಾಗಿದ್ದರು. ಅವರಿಗೆ ಮೂರು ಹೆಣ್ಣು ಮಕ್ಕಳು. ಪುತ್ರ ಸಂತಾನಾಪೇಕ್ಷಿಗಳಾಗಿ ರಾಯರ ದರ್ಶನಕ್ಕೆ ಬಂದು, ಸೇವೆ ಮಾಡಿ ಪುತ್ರನನ್ನು ಪಡೆದರು. ತಮ್ಮನ ಕೈ ಮುರಿದ ಸಮಯದಲ್ಲಿ ಮದ್ರಾಸಿನಲ್ಲಿದ್ದುದರಿಂದ ಶ್ರೀ ಮಂತ್ರಾಲಯ ಮಹಾತ್ಮ್ಯೆಯನ್ನು ತಿಳಿಸಿ ರಾಯರನ್ನಾಶ್ರಯಿಸಲು ಹೇಳಿದರು.

ಶ್ರೀ ಹರಿ ಅಚ್ಯುತರಾಮ ಶಾಸ್ತ್ರಿಗಳು 3-5-69ಕ್ಕೆ ಮಂತ್ರಾಲಯಕ್ಕೆ ಬಂದರು. ಮದ್ರಾಸಿನಿಂದ ನಮ್ಮ ಅಣ್ಣ ಹನುಮಂತಾಚಾರ್ಯರು ಬಂದರು. ಬೆಂಗಳೂರಿನಿಂದಾ ನಾನು ಹೊರಟು ಅವರನ್ನು ಮಂತ್ರಾಲಯದಲ್ಲಿ ಸೇರಿದೆ. ಶಾಸ್ತ್ರಿಗಳು ತಮ್ಮ ಕೈಮುರಿದ ವಿಷಯವನ್ನು ಆದ್ಯಂತವಾಗಿ ನನಗೆ ತಿಳಿಸಿದರು. ಗುರುರಾಜರ ಮಹಿಮೆಯನ್ನಭಿನಂದಿಸಿದರು! ಮರುದಿನ ಶ್ರೀ ಗುರುರಾಜರ ಬೃಂದಾವನದ ಮುಂದೆ ಕುಳಿತು ನಾನು ರಚಿಸಿದ

ಶ್ರೀ ರಾಘವೇಂದ್ರ ನಕ್ಷತ್ರ ಮಾಲಿಕೆ"ಯ

ಸೀಸಪದ್ಯಗಳನ್ನುಸುಶ್ರಾವ್ಯವಾಗಿ ಪಾಡಿದರು. ಪಿಟೀಲು ಬಾರಿಸಿದರು. ಗಾಂಧರ್ವ ವಿದ್ಯಾನಿಪುಣರು. ಶಾಸ್ತ್ರೀಯ ಸಂಗೀತವೇತ್ತರು ಗಾನವಿದ್ಯಾ ವಿಶಾರದರಾದ (ವೀಣ ತಿಮ್ಮಣ್ಣ ಭಟ್ಟರು) ರಾಯರ ಮುಂದೆ ಕುಳಿತು ಪಾಮರನಾದ ನನ್ನಿಂದ ರಚಿತವಾದ ಪದ್ಯಮಾಲಿಕೆಯನ್ನು ಹೃದ್ಯವಾಗಿ ಪಾಡುವುದಕ್ಕಿಂತಲೂ ಸತ್ಕವಿಗಿನ್ನೇನು ಬೇಕು! ರಾಯರಿಗೆ ಹಸ್ತೋದಕಕ್ಕೆ ಕೊಟ್ಟು ಮದರಾಸಿಗೆ ಪ್ರಯಾಣ ಬೆಳೆಸಿದರು.

ರಾಮಶಾಸ್ತ್ರಿಗಳು ಗುರುರಾಜರಭಕ್ತರಾದರು!

# ಬೆನಕಪ್ಪನಿಗೆ ರಾಯರ ದರ್ಶನ

ಮಂತ್ರಾಲಯಕ್ಕೆ ಸಮೀಪದಲ್ಲಿರುವ ಲಚ್ಚುಮರಿ ಎಂಬ ಗ್ರಾಮದಲ್ಲಿ ಬೆನಕಪ್ಪನೆಂಬ ಭಕ್ತನು ಗುರುರಾಜರ ಪ್ರೀತಿಗೆ ಪಾತ್ರನಾದನು. ಪ್ರತಿ ಗುರುವಾರ ಮಂತ್ರಾಲಯಕ್ಕೆ ಬಂದು ಶ್ರೀ ರಾಯರನ್ನು ಪ್ರತ್ಯಕ್ಷವಾಗಿ ನೋಡಿ ಮಾತನಾಡಿಸುತ್ತಿದ್ದ ಭಾಗ್ಯಶಾಲಿ. ಅದು ಶ್ರೀ ಭುವನೇಂದ್ರತೀರ್ಥರ ಕಾಲ. ಗುರುರಾಜರು ಬೆನಕಪ್ಪನಿಗೆ ದರ್ಶನ ಕೊಡುವ ವಿಷಯವನ್ನು ತಿಳಿದು, ತಮಗೂ ಶ್ರೀ ರಾಯರ ದರ್ಶನ ಮಾಡಿಸಬೇಕೆಂದರು. ಬೆನಕಪ್ಪನು ರಾಯರಲ್ಲಿ ವಿಜ್ಞಾಪಿಸಲು, ಭುವನೇಂದ್ರರಿಗೆ ತಮ್ಮ ದರ್ಶನ ಪಡೆಯುವ ಯೋಗವಿಲ್ಲ ವೆಂದರು. ಆದರೂ ಭುವನೇಂದ್ರರು ಬಿಡಲೊಲ್ಲರು. ಬಲವಂತ ಮಾಡಿದರು. ಮರುದಿನ ಬೆನಕಪ್ಪನು ರಾಯರಿಗೆ ಅರಿಕೆ ಮಾಡಿದನು. ಆಗ ರಾಯರು ಆಗಲಿ ! ಆದರೆ ಬೃಂದಾವನದ ಮುಂದೆ ಕೂತು ನೋಡಲಿ ! ನೀನು ಮಾತ್ರ ಮಾತಾಡಕೂಡದು ಮೌನದಿಂದಿರಬೇಕೆಂದು ಕರಾರು ಮಾಡಿದರು.

ಅನಂತರ ಮತ್ತೊಂದು ಗುರುವಾರ ಬೆನಕಪ್ಪನು ರಾಯರ ದರ್ಶನಕ್ಕೆ ಬಂದನು. ಭುವನೇಂದ್ರರು ರಾಯರ ಮುಂದೆ ಕುಳಿತರು. ಬೃಂದಾವನದಿಂದ ಗುರುರಾಜರು ತುಂಗಭದ್ರೆಗೆ ಸ್ನಾನಕ್ಕೆ ಹೊರಟರು. ಹೊರಡುವ ಸಮಯಕ್ಕೆ ಸರಿಯಾಗಿ ಭುವನೇಂದ್ರರಿಗೆ ನಿದ್ರೆ ಬಂದಿತು. ತೂಗುಡಿಸಿದರು. ರಾಯರು ಮರಳಿ ಬಂದು ಬೃಂದಾವನ ಪ್ರವೇಶ ಮಾಡಿದರು. ಆಗಲೂ ಭುವನೇಂದ್ರರಿಗೆ ಎಚ್ಚರವಾಗಲಿಲ್ಲ. ಬೆನಕಪ್ಪನಿಗೆ ತಡೆಯಲಾಗಲಿಲ್ಲ.

'ಸ್ವಾಮಿಗಳೇ ! ರಾಯರು ! ರಾಯರು !'

ಎಂಬುದಾಗಿ ಕೂಗಿ ಭುವನೇಂದ್ರರನ್ನು ಎಚ್ಚರಗೊಳಿಸಿದ. ಆ ಹೊತ್ತಿಗೆ ರಾಯರು ಬೃಂದಾವನ ಪ್ರವೇಶಮಾಡಿದರು ! ಭುವನೇಂದ್ರರು ಜುಲುಮೆ ಇಂದ ಕಣ್ತೆರೆದರು. ಗುರುರಾಜರ ಶಾಟಿ ಮಾತ್ರ ಕಂಡಿತು ! ದರ್ಶನಕ್ಕೆ ಪ್ರಾಪ್ತಿ

ಇರಬೇಕಲ್ಲವೆ ! ರಾಯರ ದರ್ಶನವಾಗಲಿಲ್ಲ ! ಬೆನಕಪ್ಪನು ರಾಯರು ಹಾಕಿದ ಕರಾರನ್ನತಿಕ್ರಮಿಸಿ, ಮೌನವನ್ನು ಮುರಿದು ಭುವನೇಂದ್ರರನ್ನು ಎಬ್ಬಿಸಿದ ನಲ್ಲವೇ ? ಅದಕ್ಕೆ ಶಿಕ್ಷೆಯೆಂಬಂತೆ ಅಂದಿನಿಂದ ಬೆನಕಪ್ಪನಿಗೆ ಪ್ರತ್ಯಕ್ಷ ದರ್ಶನ ವಿಲ್ಲದಾಯಿತು. ಸ್ವಪ್ನದಲ್ಲಿ ಕಾಣಿಸಿಕೊಂಡು ರಾಯರು ಬೆನಕಪ್ಪನ ಸಂಗಡ ಮಾತನಾಡುತ್ತಿದ್ದರು !

## ದಾಸರಿಗೆ ಜಲಗಂಡ ತಪ್ಪಿತು

ಅದು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲ ! ಸುರಪುರದ ಆನಂದದಾಸರು ತುಂಗಭದ್ರಾ ನದೀತೀರದಲ್ಲಿರುವ ಪಂಚಮುಖ ಪ್ರಾಣ ದೇವರ ದರ್ಶನ ಪಡೆದು ಮಂತ್ರಾಲಯಕ್ಕೆ ಶ್ರೀ ರಾಯರ ಆರಾಧನೆಗೆಂದು ಪ್ರಯಾಣವಾದರು. ದಾಸರು ಗಾನವಿದ್ಯಾವಿಶಾರದರು. ಕೀರ್ತನಕಾರರು. ತುಂಗಭದ್ರೆಯು ಪೂರ್ಣ ಪ್ರವಾಹದಲ್ಲಿರುವುದರಿಂದ ಅಂಬಿಗರು ಹರಗೋಲ ನ್ನಾಕಲು ನಿರಾಕರಿಸಿದರು. ಆನಂದದಾಸರೊಬ್ಬರನ್ನೆ ಕರೆದುಕೊಂಡುಹೋಗಲು ಒಪ್ಪಿದರು.

ದಾಸರು ಹರಗೋಲನ್ನೇರಿ ಕುಳಿತರು. ಅಂಬಿಗರು ನಡೆಸಿದರು. ಅರ್ಧ ದಾರಿಯಲ್ಲಿ ಪ್ರವಾಹವು ಹೆಚ್ಚಾಗಿ ಹರಗೋಲು ಮುಳುಗುವ ಸಂಭವ ಬಂದಿತು ! ವಿಷಯವನ್ನು ತಿಳಿಸಿ ಅಂಬಿಗರು ನದಿಯಲ್ಲಿ ಹಾರಿಕೊಂಡರು. ದಾಸರಿಗೆ ದಾರಿ ತೋರದಾಯಿತು ! ಮಂತ್ರಾಲಯ ಪ್ರಭುಗಳನ್ನೆ ಮೊರೆ ಹೊಕ್ಕರು ! ಕಾಪಾಡಬೇಕೆಂದು ಪ್ರಾರ್ಥಿಸಿದರು ! ಆಗ ಇಬ್ಬರು ಕೌಪೀನ ಧಾರಿಗಳು ಹರಗೋಲನ್ನು ನಡೆಸಿ ದಡೆಗೆ ತಂದರು. ದಾಸರು ಕೆಳಕ್ಕಿಳಿಯುವಾಗ ಅವರ ಹೆಸರೇನೆಂದು ಕೇಳಲು

"ಮಂಚಾಲೆ ರಾಘಪ್ಪ – ವಾದಪ್ಪ ಮಂಚಾಲೆ"

ಎಂಬುದಾಗಿ ತಿಳಿಸಿ ಅವರು ಅದೃಶ್ಯರಾದರು. ಗುರುರಾಜರು ಹಾಗೂ ವಾದೀಂದ್ರರೇ ಬಂದು ಆನಂದದಾಸರಿಗೆ ದರ್ಶನ ಕೊಟ್ಟು ಜಲಗಂಡವನ್ನು ತಪ್ಪಿಸಿದರು !

## ಮಕ್ಕಳನ್ನು ಬೇಡುವವರಿಗೆ ಮುಂಚಾಲೆ

ಗುರುರಾಜರನ್ನನೇಕರು ಆಶ್ರಯಿಸಿದ್ದಾರೆ ! ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಸಂಕಟ ! ಬಯಕೆ ! ಆಶೆ ! ಆಕಾಂಕ್ಷೆಗಳು ! ರಾಯರು ಎಲ್ಲವನ್ನು ಪೂರ್ಣಮಾಡುವರು. ಸಂತಾನಾಪೇಕ್ಷೆಯಿಂದ ಅನೇಕರು ಮಂತ್ರಾಲಯ ಪ್ರಭುಗಳ ಸೇವೆ ಮಾಡುವುದು ಕಂಡುಬಂದಿದೆ !

"ಮಕ್ಕಾಳ ಬೇಡೋರು ಮುಂಚಾಲೆಗ್ಹೋಗುವರು"

ಎಂಬ ಹಾಡೇ ಹೆಣ್ಣುಮಕ್ಕಳು ಹಾಡುವುದು ಕೇಳಿಬರುವುದು. ಅಪ್ಪಣಾರ್ಯರು ಗುರುಸ್ತುತಿಯಲ್ಲಿ "ಮಹಾವಂಧ್ಯಾ ಸುಪುತ್ರಪ್ರದಃ" ಹುಟ್ಟುಬಂಜೆಗೆ ಪುತ್ರರತ್ನವನ್ನನುಗ್ರಹಿಸುವರೆಂಬುದಾಗಿ ಅಪ್ಪಣೆ ಕೊಟ್ಟಿದ್ದಾರೆ ! ಇದು ಸತ್ಯವಾದ ಮಾತು ! ಅನೇಕ ದೃಷ್ಟಾಂತಗಳನ್ನು ಕಂಡಿದ್ದೇವೆ !

ರಾಯರ ಮಠದ ಶಿಷ್ಯರಾದ ವೇಣೀಸೋಮಪುರ ನಿವಾಸಿಗಳಾದ ವೆಂಕಟನರಸಿಂಹಾಚಾರ್ಯರಿಗೆ ಮಕ್ಕಳಾಗಲಿಲ್ಲ, ವೃದ್ಧಾಪ್ಯವೂ ಬಂದಿತು! ಆಗ ಅವರು ಶ್ರೀ ರಾಯರಲ್ಲಿ ಭಕ್ತಿಪೂರ್ವಕವಾಗಿ ಸೇವೆ ಮಾಡಿದರು. ಗುರುರಾಜರು ಪ್ರಸನ್ನರಾದರು. ಸ್ವಪ್ನದಲ್ಲಿ ಫಲ ಮಂತ್ರಾಕ್ಷತೆಯನ್ನನುಗ್ರಹಿಸಿದರು. ಅನಂತರ ನರಸಿಂಹಾಚಾರ್ಯರಿಗೆ ಪುತ್ರಸಂತಾನವಾಯಿತು ! ಮಗನು ಮೇಧಾವಿ ! ದೊಡ್ಡ ವಿದ್ವಾಂಸನಾದನು. ವ್ಯಾಸತತ್ವಜ್ಞನೆಂಬ ಅಭಿದಾನದಿಂದ ಪ್ರಸಿದ್ಧಿಯಾದನು. ಗುರ್ವನುಗ್ರಹದಿಂದ ಹುಟ್ಟಿದ ಶಿಶುವು ಸಾಮಾನ್ಯ ಮಾನವನಾಗುವನೇ ?

## ಹುಚ್ಚು ಗುಣವಾಯಿತು !

1937ರಲ್ಲಿ ಹೈದರಾಬಾದ್ ಮಿಲಿಟರಿ ಆಫೀಸಿನಲ್ಲಿ ಗುಮಾಸ್ತನಾಗಿದ್ದ ಕೃಷ್ಣಯ್ಯರ್‌ಗೆ ಹುಚ್ಚು ಹಿಡಿಯಿತು. ಅಕ್ಕನೊಂದಿಗೆ ಮಂತ್ರಾಲಯಕ್ಕೆ ಬಂದನು. ರಾಯರ ಸೇವೆ ಮಾಡಿದನು. ದಡ್ಡರೂ – ಜಾಣರೂ ರಾಯರ ಸೇವೆಯನ್ನು ಸರಿಯಾಗಿ ಮಾಡಲೊಲ್ಲರು. ಹುಚ್ಚ ನಿನ್ನೆಂತು ಮಾಡ್ಯಾನು ! ಆದರೆ ಬೆಳಗ್ಗೆ ನದಿಗೆ ಸ್ನಾನಕ್ಕೆ ಹೋಗಿ ದಿಗಂಬರನಾಗಿ ಸ್ನಾನ ಮಾಡಿ ಇದ್ದೊಂದು ಬಟ್ಟೆಯನ್ನು ಒಗೆದು ಉಡುತ್ತಿದ್ದನು. ಹುಚ್ಚನ ಚರ್ಯೆಯ ನ್ನಾರು ಆಕ್ಷೇಪಿಸಬೇಕು ? ಹೀಗೆ ಕೆಲದಿನಗಳುರುಳಿದವು.

ಒಂದು ದಿನ ರಾತ್ರಿ ಅಯ್ಯರನು ನಿದ್ರೆ ಬಾರದೇ ಒಂದು ಹೊತ್ತಿನಲ್ಲಿ ನದಿಗೆ ಹೊರಟನು. ಸ್ನಾನಕ್ಕಿಳಿದನು. ಅಲ್ಲಿ ಆತನಿಗೆ ನಾಲ್ವರು ಯತಿಗಳ ದರ್ಶನವಾಯಿತು ! ಅವೇಳೆಯಲ್ಲಿ ಸ್ನಾನಕ್ಕೇಕೆ ಬಂದಿ ? ಎಂಬುದಾಗಿ ಯತಿ ಗಳು ಪ್ರಶ್ನಿಸಲು, ನೀವೇಕೆ ಬಂದಿರಿ ? ಎಂದು ಮರು ಸವಾಲು ಹಾಕಿದನಾ ಹುಚ್ಚ ! ಹೊರಟುಹೋಗೆಂದು ಹೇಳಲು ಅಯ್ಯರ್ ಕೂಡಲೆ ಬಂದು ಪೀಠಸ್ಥ ರಾದ ಯತಿಗಳನ್ನೆಬ್ಬಿಸಿ ಗೊಂದಲಕ್ಕೀಡಾದನು. ಹುಚ್ಚನ ಜಾಣ ಮಾತನ್ನು ಯಾರೂ ಕೇಳುವುದಿಲ್ಲ !

ಮುಂದೆ ನಾಲ್ಕಾರು ದಿನಗಳಲ್ಲಿ ಅಯ್ಯರನಿಗೆ ಸ್ವಪ್ನವಾಯಿತು ! ರಾಯರು ದರ್ಶನವಿತ್ತು ಫಲ ಮಂತ್ರಾಕ್ಷತೆ ಕೊಟ್ಟು ಆಶೀರ್ವದಿಸಿದರು. ಅಯ್ಯರ್ ಹುಚ್ಚು ಬಿಡಲು, ರಾಯರಿಗೆ ಕಾಣಿಕೆ ಸಲ್ಲಿಸಿ ಹೊರಟುಹೋದನು !

## ಹಾವಿನ ರೂಪದಲ್ಲಿ ಅಪರಂಜಿ

ಅಪೇಕ್ಷಿತ ಪ್ರದಾತರಾದ ಗುರುಸಾರ್ವಭೌಮರನ್ನೆಲ್ಲರೂ ಆಶ್ರಯಿಸುತ್ತಾರೆ ! ಯಾರಲ್ಲಿ ಏನಿಲ್ಲವೊ ಅದನ್ನೆ ಬಯಸುತ್ತಾರೆ ! ಸಹಜವಾದುದೆ ! ಓರ್ವ ಬಡ

ಬ್ರಾಹ್ಮಣನು ಗುರುರಾಜರ ಸೇವೆಯನ್ನು ಮಾಡಿ ವಿಶೇಷವಾಗಿ ದ್ರವ್ಯವನ್ನಪೇಕ್ಷಿಸುತ್ತಾನೆ !

ಯಾವುದಕ್ಕೂ ಪರಿಪಕ್ವಕಾಲ ಬರಬೇಕು ! ಬಡ ಬ್ರಾಹ್ಮಣನ ಮೊರೆ ಕೇಳಿದರು ರಾಯರು.

ಹಣವು ಸರ್ಪದ ರೂಪದಲ್ಲಿದೆ ! ತೆಗೆದುಕೋ ! ಎಂಬುದಾಗಿ ಸ್ವಪ್ನವಾಯಿತು ! ಮರುದಿನ ಆತನ ಕಣ್ಣಿಗೆ ಹಾವು ಕಾಣಿಸಿಕೊಂಡಿತು ! ಯಾರಿಗಾದರೂ ಹಾವನ್ನು ಮುಟ್ಟುವ ಧೈರ್ಯ ಬರುವುದೇ? ಬ್ರಾಹ್ಮಣನು ಹೆದರಿದ ! ಮತ್ತೆ ರಾಯರಲ್ಲಿ ಮೊರೆಹೊಕ್ಕ. ಹಣವನ್ನು ಕೇಳುವಿ ! ಕೊಟ್ಟರೆ ಹಿಡಿಯಲೊಲ್ಲೆ, ಎಂಬುದಾಗಿ ಸೂಚನೆಯಾಯಿತು ! ಮರುದಿವಸ ಬೆಳಿಗ್ಗೆ ಮತ್ತೆ ಹಾವು ಕಾಣಿಸಿಕೊಂಡಿತು ! ಬಿಲದ ಒಳಗೆ ಹೋಗುತ್ತಿತ್ತು. ಬ್ರಾಹ್ಮಣನು ಧೈರ್ಯ ಸಾಲದೆ ಹಾವಿನ ಬಾಲದ ತುದಿಯನ್ನು ಹಿಡಿದನು. ಅಷ್ಟೇ ಬಂಗಾರವಾಯಿತು ! ಆಶ್ಚರ್ಯಾನಂದಭರಿತನಾದ ಆ ಬ್ರಾಹ್ಮಣನು ಹಾವನ್ನಿಡಿಯಲು ಧೈರ್ಯ ಸಾಲದೇ ತನಗೆ ಪ್ರಾಪ್ತಿ ಇದ್ದಷ್ಟೆ ದೊರೆಯಿತೆಂದು ಸಮಾಧಾನ ಮಾಡಿಕೊಂಡನು !

## ಶ್ರೀನಿವಾಸನಲ್ಲಿ ದೂರು

ಓರ್ವ ಭಕ್ತನು ಮಂತ್ರಾಲಯಕ್ಕೆ ಬಂದು ಗುರುರಾಜರ ದರ್ಶನ ಮಾಡಿ ಪ್ರತಿ ದಿನ ನದಿಯಲ್ಲಿ ಮಿಂದು ರಾಯರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಿದನು. ವರುಷಗಳುರುಳಿದವು. ರಾಯರು ಪ್ರಸನ್ನರಾಗಲಿಲ್ಲ. ಆಗ ಆ ಭಕ್ತನು ತಿರುಪತಿಗೆ ಹೋಗಿ ಶ್ರೀನಿವಾಸನಲ್ಲಿ ಮಂತ್ರಾಲಯ ಪ್ರಭುಗಳು ತನ್ನ ಬಯಕೆ ಪೂರ್ಣ ಮಾಡಲಿಲ್ಲವೆಂಬುದಾಗಿ ದೂರು ಕೊಟ್ಟು ವಿಚಾರಣೆ ನಡೆಸಲು ದೇವದೇವರನ್ನು ಪ್ರಾರ್ಥಿಸಿದನು.

ಭಕ್ತವತ್ಸಲನಾದ ಶ್ರೀನಿವಾಸನಾ ಭಕ್ತನ ಮೊರೆಯನ್ನು ಕೇಳಿ ಗುರು ರಾಘವೇಂದ್ರರನ್ನು ಅಲ್ಲಿಗೆ ಕರೆಸಿ ವಿಚಾರಣೆ ನಡೆಸಿದರು ! ಆಗ ರಾಯರು, ಅಪ್ಪಣಾಚಾರ್ಯರು ರಚಿಸಿದ ಸ್ತುತಿಗೆ ಸಾಕ್ಷೀ ಹಯಾಸ್ಯೋತ್ರಹಿ ! ಎಂಬು ದಾಗಿ ಒಪ್ಪಿಗೆ ಕೊಟ್ಟಿರುತ್ತೇನೆ ! ಭಕ್ತನು ಅದರಲ್ಲಿ ಹಾಕಿದ ನಿಯಮವನ್ನು ಪಾಲಿಸಲಿಲ್ಲ: ಎಂದರೆ, "ಯೋ ಭಕ್ತ್ಯಾ ಗುರು ರಾಘವೇಂದ್ರ ಚರಣದ್ವಂದ್ವಂ ಸ್ಮರನ್ ಯಃಪಠೇತ್"

ಭಕ್ತಿಯಿಂದ ಸೇವೆ ಮಾಡಿದರೆ, ಸ್ತೋತ್ರ ಪಠಣೆ, ಪಾರಾ ಯಣ ಮಾಡಿದರೆ ಮಾತ್ರ ಫಲ ದೊರೆಯುವುದಾಗಲಿ, ಸುಮ್ಮನೆ ಗಾಣದ ಎತ್ತಿನಂತೆ ಬೃಂದಾವನ ಪ್ರದಕ್ಷಿಣೆ ಮಾಡಿದ ಈ ಭಕ್ತನಿಗೆ ಫಲವು ಹೇಗೆ ದೊರಕುವುದು ? ಎಂಬುದಾಗಿ ಶ್ರೀನಿವಾಸನಲ್ಲಿ ಸಂಜಾಯಿಷೀ ಕೊಟ್ಟರು ಗುರುರಾಜರು.

## ಪಾದೋದಕದಿಂದ ಕಾಲರಾ ಗುಣವಾಯಿತು

1935ರಲ್ಲಿ ರಾಯಚೂರ್ ಪ್ರಾಂತದಿಂದ ಜಗನ್ನಾಥರಾಯರ ಮಗ ಬುದ್ಧಿಭ್ರಮಣೆಯಿಂದ ಪರಿಹಾರಕ್ಕಾಗಿ ರಾಯ:ರಲ್ಲಿ ಸೇವೆಗೆ ಬಂದನು. ಆತನಿಗೆ 36 ವರ್ಷ ವಯಸ್ಸಾಗಿತ್ತು. ರಾಯರ ಸೇವೆಯನ್ನು ಮಾಡಿದನು. ಆ ವರ್ಷ 'ಕಾಲರಾ' ಬೇನೆಯು ಹಬ್ಬಿತು. ಅನೇಕರನ್ನು ಬಲಿಗೊಂಡಿತು ! ಆ ಯುವಕನಿಗೆ ವಾಂತಿ, ಭೇದಿಗಳಾದುವು. ತಂದೆಯವರು ಬಂದು ನೋಡಿದರು. ಗುರುರಾಜರಲ್ಲಿ ಭಕ್ತಿ ವಿಶ್ವಾಸಗಳುಳ್ಳ ಜಗನ್ನಾಥರಾಯರು ರೋಗಗ್ರಸ್ತನಾದ ಮಗನಿಗೆ ಔಷಧೋಪಚಾರಗಳನ್ನೇನೂ ಮಾಡಲಿಲ್ಲ. ರಾಯರ ಮೇಲೆ ಭಾರ ಹಾಕಿದರು. ರಾಯರ ಪಾದೋದಕವನ್ನು ಮಾತ್ರ ತಂದು ಕುಡಿಸಿ ದರು. ರಾಯರ ಸ್ತೋತ್ರಪಾರಾಯಣ ಮಾಡಿದರು. ಮೂರೇ

ದಿನಗಳಲ್ಲಿ ಆ ಯುವಕನ ಕಾಲರಾ ಬೇನೆ ಪೂರ್ಣ ಗುಣವಾಯಿತು ! ರಾಯರಿಗೆ ಹಸ್ತೋದಕ ಮಾಡಿಸಿ ಜಗನ್ನಾಥರಾಯರು ಮಗನನ್ನು ಕರೆದುಕೊಂಡು ತಮ್ಮ ಸ್ವಗ್ರಾಮಕ್ಕೆ ಹಿಂತಿರುಗಿದರು.

## ನಿಂತ ಮಾತು ಬಂದಿತು!

**ಬಿಜಾಪುರ** ಜಿಲ್ಲಾ **ಕಲಾದಗಿ** ಗ್ರಾಮ ನಿವಾಸಿಗಳಾದ **ವೆಂಕಟರಾವ ಹಂಜಿಯ**ವರಿಗೆ ಚಿಕ್ಕ ಕಾಯಿಲೆ ಆಗಿ 1953ರಲ್ಲಿ ಮಾತು ನಿಂತಿತು ! ಮಾನವರಿಗೂ ಪಶುಗಳಿಗೂ ವ್ಯತ್ಯಾಸವೆಂದರೆ ಮುಖ್ಯವಾದದು ಮಾತು. ಮಾತಾಡಲು ಬಾರದ ಮಾನವನ ದುಃಖವು ಅಪಾರವಾದದು. ವೈದ್ಯರು ಚಿಕಿತ್ಸೆ ನಡೆಸಿದರು. ಪ್ರಯೋಜನವಾಗಲಿಲ್ಲ ! 195'ರಲ್ಲಿ ರಾಯರ ಭಕ್ತರೊಬ್ಬರು ಗುರುರಾಜರ ಮಹಿಮೆಯನ್ನು ತಿಳಿಸಿ ಅವರ ಮನಸ್ಸಿಗೆ ಬಂದರೆ **ಮೂಕನು ಮಾತನಾಡಬಲ್ಲನು.** ದೊಡ್ಡ ಸಮಸ್ಯೆ ಅಲ್ಲ, ಅವರನ್ನಾಶ್ರಯಿಸುವುದೇ ಒಳಿತೆಂದರು. ಆಪತ್ಸಮಯದಲ್ಲಿ ಯಾರು ಏನೇ ಹೇಳಲಿ ಮಾಡಬೇಕಾದುದು ಧರ್ಮ. ವೆಂಕಟರಾಯರು ಮಂತ್ರಾಲಯಕ್ಕೆ ಪ್ರಯಾಣವಾದರು. ಮಂಡಲಪರ್ಯಂತ ಶ್ರೀ ಗುರುರಾಜರ ಸೇವೆಯನ್ನು ನಿಷ್ಠೆಯಿಂದ ಮಾಡಿದರು. ರಾಯರ ಚಿತ್ತಕ್ಕೆ ಬಂದರೆ ಮಾತ್ರ ನಾವು ಮಂತ್ರಾಲಯವನ್ನು ಸೇರುವೆವು. ಇಲ್ಲದಿದ್ದಲ್ಲಿ ಎಲ್ಲಾ ವಸತಿಗಳಿದ್ದು ವರುಷಗಳಾದರೂ ಮಂತ್ರಾಲಯ ಪ್ರಯಾಣ ಜರುಗುವುದಿಲ್ಲ. ಗುರುರಾಜರು ಪ್ರಸನ್ನರಾದರು. ವೆಂಕಟರಾಯರಿಗೆ ಮಾತು ಬಂದಿತು ! ಅವರ ಆನಂದಕ್ಕೆ ಮಿತಿ ಇಲ್ಲದಾಯಿತು ! ರಾಯರಿಗೆ ಹಸ್ತೋದಕಕ್ಕೆ ಕೊಟ್ಟು ಸೇವೆ ಮುಗಿಸಿ ಸ್ವಗ್ರಾಮಕ್ಕೆ ಹಿಂತಿರುಗಿದರು.

# ಮಗನ ಹುಚ್ಚು ಕಳೆದರು ತಂದೆಯ ಪ್ರಾಣ ಉಳಿಸಿದರು

ಶ್ರೀ ಟಿ. ವೆಂಕಟಸುಬ್ಬಯ್ಯನವರು ಬೆಂಗಳೂರು ನಿವಾಸಿಗಳು. ನಿವೃತ್ತ ಮ್ಯಾಜಿಸ್ಟ್ರೇಟರು. ಇವರ ಮಗನಿಗೆ ಬುದ್ಧಿಭ್ರಮಣವಾಯಿತು. ಆರು ತಿಂಗಳು ಕಾಲ ಔಷಧೋಪಚಾರಗಳನ್ನು ಮಾಡಿದರು. ಪ್ರಯೋಜನವಾಗಲಿಲ್ಲ. ತಂದೆಯು ಚಿಂತಾಕ್ರಾಂತರಾದರು. ದಿಕ್ಕು ತೋಚದಂತಾಯಿತು ! ಒಂದು ದಿನ ರಾತ್ರಿ ವೆಂಕಟಸುಬ್ಬಯ್ಯನವರಿಗೆ ಸ್ವಪ್ನದಲ್ಲಿ ಗುರುರಾಜರು ದರ್ಶನವಿತ್ತು ಚಿಂತಿಸಬೇಕಾಗಿಲ್ಲ ಇನ್ನು ಹದಿನೈದು ದಿನಗಳಲ್ಲಿ ಮಗನ ಹುಚ್ಚು ಬಿಡುವುದು ಎಂದಪ್ಪಣೆ ಇತ್ತರು. ಅದರಂತೆಯೆ ಮಗನಿಗೆ ಹದಿನೈದು ದಿನಗಳಲ್ಲಿ ಬುದ್ಧಿಯು ಸ್ವಾಧೀನಕ್ಕೆ ಬಂದಿತು ! ಮೊದಲಿನಂತೆ ಮನುಷ್ಯನಾದನು.

ವಯೋವೃದ್ಧರಾದ ವೆಂಕಟಸುಬ್ಬಯ್ಯನವರಿಗೆ ಮೂರನೇ ಸಲ ಜಲ ಬಾಧೆಯುಂಟಾಯಿತು. ವೈದ್ಯರು ಚಿಕಿತ್ಸೆ ನಡೆಸಿ ಕೈಬಿಟ್ಟರು. ಶಸ್ತ್ರ ಚಿಕಿತ್ಸೆಯು ಮುಗಿಯಿತು. ಅವಸಾನ ಕಾಲ ಬಂದಿತೆಂದು ನಿರ್ಧರಿಸಿಕೊಂಡು ವಿಕ್ಟೋರಿಯಾ ಆಸ್ಪತ್ರೆಯಿಂದ ಮನೆಗೆ ಮರಳಿ ಬಂದರು. ಮಾನವರು ಕೈಬಿಟ್ಟ ಮೇಲೆ ಮಹಾತ್ಮರನ್ನಷ್ಟೆ ಆಶ್ರಯಿಸಬೇಕಾದದು ! ತಂದೆ, ಮಗಳು ಇಬ್ಬರೂ ಭಕ್ತಿಯಿಂದ ಶ್ರೀ ರಾಯರ ಸೇವೆಯನ್ನು ಮಾಡಿದರು. ಕರುಣಾ ಸಮುದ್ರರಾದ ಗುರುರಾಜರು ಪ್ರಸನ್ನರಾದರು. ಕೇಳಬೇಕಾದ್ದೇನಿದೆ ! ಕೆಲವೇ ದಿನಗಳಲ್ಲಿ ವೈದ್ಯರಿಂದ ಗುಣವಾಗದ ಬೇನೆಯನ್ನು ಕಳೆದರು. ಆರೋಗ್ಯ ವನ್ನನುಗ್ರಹಿಸಿದರು.

ಆರೋಗ್ಯವನ್ನು ಪಡೆದು ವೆಂಕಟಸುಬ್ಬಯ್ಯನವರು ಮಂತ್ರಾಲಯಕ್ಕೆ ಹೋಗಿ ಮೂರು ದಿವಸಗಳು ಗುರುರಾಜರ ಸೇವೆಯನ್ನು ಮಾಡಿ, ಕಾಣಿಕೆ ಲ್ಲಿಸಿ, ರಾಯರಿಗೆ ಹಸ್ತೋದಕ ಕೊಟ್ಟು, ಬೆಂಗಳೂರಿಗೆ ಹಿಂದಿರುಗಿದರು !

# ಗುರುರಾಜರು ಶಸ್ತ್ರಚಿಕಿತ್ಸೆ ನಡೆಸಿದರು

ನಮ್ಮ ಬಾಂಧವರಲ್ಲಿ ಗುರುರಾಜರ ಭಕ್ತರೇ ಹೆಚ್ಚು ಜನರಿದ್ದಾರೆ! ಕೆಲವರು ಅಂತರಂಗ ಭಕ್ತರೂ ಇದ್ದಾರೆ. ಬೆಂಗಳೂರು ನಿವಾಸಿಗಳಾದ ಸೌದತ್ತಿ ರಾಮರಾಯರೊಬ್ಬರು. ಇವರು ಮಲ್ಲೇಶ್ವರದಲ್ಲಿರುತ್ತಾರೆ. ಇವರ ಜ್ಯೇಷ್ಠಪುತ್ರನಾದ ಚಿ॥ ನರಸಿಂಹಮೂರ್ತಿಗೆ ಕಲ್ಕತ್ತಾನಗರದಲ್ಲಿ ಅಶೋಕಾ ಮಾರ್ಕೆಟಿಂಗ್ ಕಂಪೆನಿಯಲ್ಲಿ ಉದ್ಯೋಗ. ಸಾವಿರ ರೂಪಾಯಿ ಸಂಬಳ. ಹುಡುಗ, ಬುದ್ಧಿವಂತ, ವಿದ್ಯಾವಂತ, ತುಂಬಾ ಧೈರ್ಯಶಾಲಿ.

ನರಸಿಂಹಮೂರ್ತಿಗೆ ಕಳೆದ ವರ್ಷ ಹೃದ್ರೋಗವು ಬಂದಿತು! ಬಂಧುಗಳಿಗೆ ಚಿಂತೆಯಾಯಿತು. ಮಾತಾಪಿತೃಗಳಿಗೆ ಮನಶ್ಶಾಂತಿ ಇಲ್ಲದಾಯಿತು! ನಿಪುಣರಾದ ವೈದ್ಯರಿಂದ ಪರೀಕ್ಷೆ ನಡೆಯಿತು. ಹೃದಯಕ್ಕೆ ಶಸ್ತ್ರ ಚಿಕಿತ್ಸೆ ಆಗಲೇ ಬೇಕೆಂಬುದು ಎಲ್ಲರ ಅಭಿಪ್ರಾಯವಾಯಿತು!

ಧೈರ್ಯಶಾಲಿಯಾದ ನರಸಿಂಹಮೂರ್ತಿಯು ಶಸ್ತ್ರಚಿಕಿತ್ಸೆಗೆ ಸಿದ್ಧನಾದನು. ಗತ್ಯಂತರವಿಲ್ಲವೆಂದಾಗ ಮಾಡುವುದೇನಿದೆ? ಇಂದಿರಾಪತಿ ನರಸಿಂಹಮೂರ್ತಿಯು ತಂದೆಯೊಡನೆ ವೆಲ್ಲೂರಿಗೆ ಪ್ರಯಾಣವಾದನು. ಚಿಕಿತ್ಸೆಯ ದಿವಸ ನಿರ್ಧಾರವಾಯಿತು. ನರಸಿಂಹಮೂರ್ತಿಯ ತಾಯಿಯವರಾದ ಶಾರದಕ್ಕನಿಗೆ ತೋಚದಂತಾಯಿತು! ಶ್ರೀ ಗುರುರಾಜರನ್ನೇ, ಸ್ಮರಿಸಿಕೊಂಡು ಮಗನನ್ನು ಕಾಪಾಡಬೇಕೆಂದು ಬೇಡಿದಳು!

ಶಾರದಕ್ಕ ದ್ವಾದಶಿಯ ದಿವಸ ವೆಲ್ಲೂರಿಗೆ ಪ್ರಯಣವಾದಳು. ನಾಲ್ಕು ದಿವಸ ಮುಂಚಿತವಾಗಿ ರಾಯರು ಸ್ವಪ್ನದಲ್ಲಿ ದರ್ಶನವಿತ್ತರು. ಶಾರದಕ್ಕ ರಾಯರ ಮಠಕ್ಕೆ ಹೋಗಿದ್ದಾಳೆ. ತೀರ್ಥವನ್ನು ಕೇಳಿದಳು. ಅರ್ಚಕರು

ರಾಯರು ಶಸ್ತ್ರಚಿಕಿತ್ಸೆಗಾಗಿ ಹೋಗಿದ್ದಾರೆ ಇಂದು, ಅಭಿಷೇಕ, ಹಸ್ತೋದಕ ತಡವಾಗುವುದು.

ಎಂದು ನುಡಿದರು. ನೋಡುತ್ತಿರಲಾಗಿ ರಾಯರು ಆಸ್ಪತ್ರೆಯನ್ನು ಪ್ರವೇಶ ಮಾಡಿದರು. ಕಾದು ಕುಳಿತು ತೀರ್ಥವನ್ನು ತೆಗೆದುಕೊಂಡು ಬಂದಳು. ದ್ವಾದಶಿಯ ದಿವಸ ವೆಲ್ಲೂರು ಸೇರಿದಳು. ಆಸ್ಪತ್ರೆಯನ್ನು ನೋಡಿದಳು. ಸ್ವಪ್ನದಲ್ಲಿ ರಾಯರು ಹೊಕ್ಕ ಆಸ್ಪತ್ರೆಯ ಮುಂದೆ ನಿಂತಿದ್ದಾಳೆ. ವೆಲ್ಲೂರು ನೋಡದ ಶಾರದಕ್ಕ ಆಸ್ಪತ್ರೆಯನ್ನೆಂತು ಕಂಡಿದ್ದಳು ! ರಾಯರು ಅನುಗ್ರಹಿಸಿದರೆಂದು ಸಮಾಧಾನ ಮಾಡಿಕೊಂಡಳು.

ವೈದ್ಯರು ಒಂದು ವಾರ ಪರೀಕ್ಷೆ ಮಾಡಿ, ನರಸಿಂಹಮೂರ್ತಿಗೆ ಶಸ್ತ್ರ ಚಿಕಿತ್ಸೆ ದಡೆಸಿದರು ಅದಕ್ಕೆ ಮುಂಚಿತವಾಗಿ ತಂದೆಯವರಾದ ರಾಮರಾಯ ರನ್ನು ಕರೆದು, ಶಸ್ತ್ರ ಚಿಕಿತ್ಸೆ ದೊಡ್ಡದು, ಪ್ರಾಣಾಪಾಯ ಸಂಭವವಿದೆ ನಮಗೆ ಧೈರ್ಯ ಸಾಲದು ! ಮಾಡೋಣವೇ ಎಂದರು ಶಸ್ತ್ರ ವೈದ್ಯರು. ರಾಮರಾಯ ರಾಗ ಡಾಕ್ಟರೆ ! ಕೂಸು ನಮ್ಮದಲ್ಲ ! ನಿಮ್ಮ ಕೈಯಲ್ಲಿ ಹಾಕಿದ್ದೇವೆ ! ಕಾಪಾಡುವ ಭಾರ ನಿಮ್ಮದು. ಹಿತವೆಂದು ತೋಚಿದ್ದನ್ನು ಮಾಡಿ ! ಎಂದರು. ಮಾತಾಪಿತೃಗಳಿಬ್ಬರೂ ಶ್ರೀ ಗುರುರಾಜರ ಮೇಲೆ ಭಾರಹಾಕಿ ಕೈಮುಗಿದರು.

ಶಸ್ತ್ರ ಚಿಕಿತ್ಸೆ ಜಯಪ್ರದವಾಗಿ ನಡೆಯಿತು. (Major Operation) ಅಷ್ಟು ಸುಗಮವಾಗಿ ನಡೆದಿದ್ದು ವೈದ್ಯರಿಗೆ ಅಚ್ಚರಿಯನ್ನುಂಟುಮಾಡಿತು ! ನಲವತ್ತು ದಿನಗಳು ವೆಲ್ಲೂರಿನಲ್ಲಿದ್ದು, ಔಷಧೋಪಚಾರಗಳನ್ನು ಪಡೆದು, ವಿಶ್ರಾಂತಿಯನ್ನು ಹೊಂದಿ, ಅನಂತರ ಮಾತಾಪಿತೃಗಳೊಡನೆ ನರಸಿಂಹ ಮೂರ್ತಿಯು ಬೆಂಗಳೂರಿಗೆ ಬಂದನು. ತಿಂಗಳು ಕಳೆದ ನಂತರ ಮತ್ತೊಮ್ಮೆ ವೈದ್ಯರು ಪರೀಕ್ಷೆ ನಡೆಸಿ ಯಾವ ತೊಂದರೆ ಇಲ್ಲವೆಂದು ಧೈರ್ಯದಿಂದ ಭರವಸೆ ಯನ್ನಿತ್ತರು. ಮರಳಿ ಬಂದ ನಂತರ **ಬೆಂಗಳೂರು** ಸೀತಾಪತಿ

ಹಾರದಲ್ಲಿ ಶ್ರೀ ಗುರುರಾಜರಿಗೆ ಹಸ್ತೋದಕಕ್ಕೆ ಕೊಟ್ಟು ಸರ್ವ ಸೇವೆ ಮಾಡಿಸಿ ರಾಯರಿಗೆ ಕಾಣಿಕೆ ಸಲ್ಲಿಸಿದರು. ನರಸಿಂಹ ಮೂರ್ತಿಯು ಈಗ ಕುಟುಂಬ ಸಮೇತ ಢಿಲ್ಲೀ ಪಟ್ಟಣದಲ್ಲಿ ಆರೋಗ್ಯದಿಂದ ಇದ್ದಾನೆ ! ಗುರುರಾಜರ ಚಿತ್ತಕ್ಕೆ ಬಂದರೆ ಎಲ್ಲವೂ ಕರತಲಾಮಲಕ ವಲ್ಲವೇ ?

## ಗುರುರಾಜರ ಪಾದುಕೆಗಳು

ಶ್ರೀ ರಾಘವೇಂದ್ರರು ಬೃಂದಾವನ ಪ್ರವೇಶ ಮಾಡುವ ಮುನ್ನ ಅವರ ಶಿಷ್ಯರಿಗೆ ತಮ್ಮ ಪಾದುಕೆಗಳನ್ನಿತ್ತರು. ಪಾದುಕೆಗಳನ್ನು ರಾಯರ ಬೃಂದಾವನದ ಅರ್ಚಕರಾದ ಶ್ರೀ ರಾಘುವೇಂದ್ರಾಚಾರ್ಯರ ಮನೆಯಲ್ಲಿ ಮಂತ್ರಾಲಯದಲ್ಲಿ, ಯಾತ್ರಿಕರು ಈಗಲೂ ನೋಡಬಹುದು. ಪಾದುಕೆಗಳನ್ನು ನೋಡಿದರೆ ಗುರುರಾಜರು ಆಜಾನುಬಾಹುಗಳೆಂದು ತಿಳಿದುಬರುತ್ತದೆ.

—o—

ಪೂರ್ಣಬೋಧಮತಾಂಬುಧಿ ಪೂರ್ಣಚಂದ್ರ !
ಚಂದ್ರಿಕಾಚಾರ್ಯ ! ಶ್ರೀ ಗುರುಸಾರ್ವಭೌಮ !
ಭಕ್ತವತ್ಸಲ ! ಶ್ರೀ ಸುಧಾಪರಿಮಳಾರ್ಯ !
ರಮ್ಯಗುಣಸಾಂದ್ರ ! ಶ್ರೀ ಗುರುರಾಘವೇಂದ್ರ !

—o—

# ಎಲ್ಲರಿಗೂ ರಾಯರ ದರ್ಶನವಾಗುವುದಿಲ್ಲ

ದೇಶದ ನಾನಾ ಭಾಗಗಳಿಂದ, ಅದರಲ್ಲೂ ಮೈಸೂರು, ಮುಂಬಯಿ, ಮದರಾಸು, ಹೈದರಾಬಾದ್, ಪ್ರದೇಶಗಳಿಂದ ರಾಯರ ದರ್ಶನಕ್ಕಾಗಿ ಭಕ್ತರು ತಂಡ ತಂಡವಾಗಿ ಬಂದು ಮಂತ್ರಾಲಯವನ್ನು ಸೇರುವುದನ್ನು ನಾವು ನೋಡುವೆವು. ಕೆಲವರಿಗೆ ಎಲ್ಲಾ ಸೌಕರ್ಯಗಳಿದ್ದೂ ಮಂತ್ರಾಲಯಕ್ಕೆ ಹೋಗಿ ಬರಲು ವರುಷಗಳಾದರೂ ಸಾಧ್ಯವಾಗಿಲ್ಲ. ಹೀಗೆ ಅನೇಕ ದೃಷ್ಟಾಂತ ಗಳನ್ನು ನಾವು ನೋಡಿದ್ದೇವೆ. ಕೇಳಿದ್ದೇವೆ. ಅಷ್ಟೇಕೆ ! ಬಳ್ಳಾರಿಯಲ್ಲಿದ್ದಾಗ ನಾವು ಆರಾರು ತಿಂಗಳಿಗೆ ರಾಯರ ದರ್ಶನ ಪಡೆಯುತ್ತಿದ್ದೆವು. ಅನಂತರದಲ್ಲಿ ಎರಡು ಮೂರು ವರುಷಗಳಾದರೂ ಮಂತ್ರಾಲಯಕ್ಕೆ ಹೋಗಿ ಬರಲಾಗಲೇ ಇಲ್ಲ. ಕಳೆದ ವರ್ಷ ನಾಲ್ಕು ತಿಂಗಳಲ್ಲಿ ಸಾಲಾಗಿ ನಾಲ್ಕು ಸಾರೆ ಮಂತ್ರಾಲ ಯಕ್ಕೆ ಹೋಗಿ ಬಂದೆ. ಆಪ್ತ ಮಿತ್ರರಲ್ಲಿ ಒಬ್ಬರಾದ ಶ್ರೀ ರೂಪನಗುಡಿ ರಾಮರಾಯರು ಐದು ವರ್ಷಗಳು ಪ್ರಯತ್ನ ಮಾಡಿದರು. ಮಂತ್ರಾಲ ಯಕ್ಕೆ ಹೋಗಿ ಬರಲಾಗಲಿಲ್ಲ. ಈಚೆಗೆ ಮೇಲಿಂದ ಮೇಲೆ ಎರಡು ಸಲ ಹೋಗಿ ರಾಯರ ದರ್ಶನ ಪಡೆದರು. ನಾವು ಮಂತ್ರಾಲಯಕ್ಕೆ ಹೋಗಿ ಬರುವೆವೆಂಬುದು ಸರಿಯಲ್ಲ. ಆದರೆ ನಮ್ಮನ್ನು ಗುರುರಾಜರು ಕರೆಸಿಕೊಳ್ಳು ವರು. ಆಗಲೇ ಅವರ ದರ್ಶನವಾಗುವುದೆಂಬುದೇ ಸರಿ.

ಒಮ್ಮೆ ಒರ್ವ ಯುವಕನು ರಾಯರ ದರ್ಶನಕ್ಕಾಗಿ ಮಂತ್ರಾಲಯಕ್ಕೆ ಬಂದನು. ಆಧುನಿಕ ಕಾಲದಲ್ಲಿ ಹಿರಿಯರನ್ನು ಗೌರವಿಸಿ ವರ್ತಿಸಬೇಕೆಂಬ ಬುದ್ಧಿ ಅನೇಕ ತರುಣರಿಗಿಲ್ಲ. ಆ ಯುವಕನು ಪಾದರಕ್ಷೆಗಳನ್ನು ತೆಗೆಯದೆ ಮಠವನ್ನು ಪ್ರವೇಶಿಸಿದ. ನೋಡಿದವರು ಹಾಗೆ ಮಾಡುವುದು ಒಳಿತಲ್ಲ ವೆಂದರು. ಕಾಲನ್ನು ಮಠದ ಬಾಗಿಲಲ್ಲಿಡುವಾಗಲೇ ಚೇಳು ಕಚ್ಚಿತು. ಚೀರಿದ. ಕಾಲ್ಚೀಲದಲ್ಲಿ ಚೇಳಿಲ್ಲ. ಚೇಳು ಕುಟುಕಿದ ನೋವು ಇದೆ. ಬಾಧೆ ಪಡುತ್ತಾನೆ ! ಹಿತೈಷಿಗಳು ಬುದ್ಧಿ ಮಾತು ಹೇಳಿ ದಂಡಿಸಿದರು. ರಾಯರು ತನ್ನ ವರ್ತನೆಯ ಬಗ್ಗೆ ಕುಪಿತರಾಗಿದ್ದಾರೆ ! ದರ್ಶನ ಪಡೆಯಲು ಒಳಗಡೆ

ಹೋದರೆ ಮತ್ತೇನಾದರೂ ಪ್ರಮಾದವಾದೀತೆಂಬ ಹೆದರಿಕೆಯಿಂದ ರಾಯರ ದರ್ಶನವನ್ನು ಪಡೆಯದೆ, ಮಠವನ್ನು ಮಾತ್ರ ನೋಡಿ, ಅಲ್ಲಿಂದಲೇ ರಾಯರಿಗೆ ನಮಸ್ಕಾರ ಮಾಡಿ ಸ್ವಸ್ಥಳಕ್ಕೆ ಹಿಂದಿರುಗಿದನು.

ಮತ್ತೊಂದು ದಾರುಣವಾದ ಘಟನೆ! ಓರ್ವ ಶ್ರೀಮಂತನು ಮಿತ್ರರಿಂದೊಡಗೂಡಿ ತನ್ನ ಕಾರಿನಲ್ಲಿ ಸುಖಪ್ರಯಾಣ ಮಾಡಿ ಮಂತ್ರಾಲಯುವನ್ನು ಸೇರಿದನಂತೆ! ಅಲ್ಲಿಗೆ ಬರುವುದಕ್ಕೆ ಮುಂಚಿತವಾಗಿಯೇ ತನ್ನ ಮಗನ ಮರಣ ವಾರ್ತೆಯು ತಂತಿ ಟಪಾಲು ಆತನಿಗಾಗಿ ಬಂದು ಕಾಯುತ್ತಿತ್ತಂತೆ. ಶ್ರೀಮಂತನು ಚಿಂತಾಕ್ರಾಂತನಾಗಿ ಮಂತ್ರಾಲಯಕ್ಕೆ ಬಂದೂ ರಾಯರ ದರ್ಶನ ವಿಲ್ಲದೇ ಹಿಂತಿರುಗಬೇಕಾಯಿತು!

**ಎಲ್ಲರಿಗೂ ರಾಯರ ದರ್ಶನವಾಗುವುದಿಲ್ಲ!**

## ಶಾಖಾ ಬೃಂದಾವನಗಳಲ್ಲಿ ಶ್ರೀ ರಾಘವೇಂದ್ರರು

ಮೂಲಸ್ಥಾನವಾದ ಮಂತ್ರಾಲಯದಲ್ಲಿ ನಡೆದಂತೆ ಪೂಜೆ, ಸೇವೆಗಳು, ಶ್ರೀ ರಾಯರ ಶಾಖಾ ವೃಂದಾವನಗಳಲ್ಲಿಯೂ ನಡೆಯುತ್ತಿರುವುದು ನಾವು ನೋಡುವೆವು. ರಾಯರ ಸೇವೆಗಾಗಿ ದೂರ ದೂರದಿಂದ ಮಂತ್ರಾಲಯಕ್ಕೆ ಭಕ್ತರು ಬರುತ್ತಾರೆ. ಸೌಕರ್ಯವಿಲ್ಲದವರು ಸಮೀಪದಲ್ಲಿರುವ ಶಾಖಾವೃಂದಾವನಗಳಲ್ಲಿ ಸನ್ನಿಹಿತರಾದ ಗುರುರಾಜರ ಸೇವೆಯನ್ನು ಮಾಡಿ ಪುನೀತರಾಗುತ್ತಿರುವುದೂ ನೋಡುವೆವು.

**ಉಡಗಣಿ, ಹೊನ್ನಾಳಿ, ಹರಪನಹಳ್ಳಿ**ಯಲ್ಲಿ ಪ್ರತಿಷ್ಠಿತವಾದ ರಾಯರ ವೃಂದಾವನಗಳು ಬಹು ಪುರಾತನವಾದುವೆಂದು ತಿಳಿದು ಬಂದಿದೆ. ಅನಂತರದಲ್ಲಿ ಅನೇಕ ನಗರಗಳಲ್ಲಿ ಪ್ರತಿಷ್ಠಿಸಲಾಗಿದೆ. ಇತ್ತೀಚೆಗೆ ಪ್ರಾಯಶಃ ಪ್ರತಿಯೊಂದು ನಗರದಲ್ಲಿಯೂ ರಾಯರ ಬೃಂದಾವನವಿರುವುದನ್ನು ಕಾಣುವೆವು.

ಮಹಾನಗರವಾದ **ಬೆಂಗಳೂರಿನಲ್ಲೇ** ಹತ್ತೆಂಟು ಶಾಖಾವೃಂದಾವನಗಳಿವೆ. ಎಲ್ಲೆಡೆಯಲ್ಲಿಯೂ ರಾಯರ ಮಹಿಮೆ ಕೇಳಿಬರುತ್ತದೆ. ತಂಡತಂಡವಾಗಿ ಭಕ್ತರು ಸೇವಿಸುತ್ತಿದ್ದಾರೆ ! ವಾಂಛಿತಾರ್ಥಗಳನ್ನು ಪಡೆಯುತ್ತಿದ್ದಾರೆ ! ಗುರುರಾಜರಿಗೆ ಪ್ರತಿದಿನ **ಪಂಚಾಮೃತಾಭಿಷೇಕ** ನಡೆಯುತ್ತಲಿದೆ. ಮೇಲಿಂದ ಮೇಲೆ **ಸರ್ವಸೇನೆ** ಹಸ್ತೋದಕಗಳಿದ್ದೇ ಇವೆ ! ವಾರವಾರದಲ್ಲಿ **ಕನಕಾಭಿಷೇಕಗಳು** ಜರುಗುತ್ತಲಿವೆ ! ಶ್ರೀ ಗುರುಸಾರ್ವಭೌಮರದು ಸುಖಪ್ರಾರಬ್ಧ. ಆದ್ದರಿಂದಲೇ ಅವರಿಗೆ ವೈಭವೋಪೇತವಾದ ಸೇವೆ ನಡೆಯುತ್ತಲಿದೆ !

**ಶಿವಮೊಗ್ಗಾ** ಜಿಲ್ಲೆಯ **ಆನವಟ್ಟಿಗೆ** ಸಮೀಪದಲ್ಲಿರುವ **ಮೂಗೂರು** ಎಂಬ ಹಳ್ಳಿಯಲ್ಲಿ ಪರಿಮಳಾಚಾರ್ಯರಿಗೆ ಪರಿಮಳೋಪೇತವಾದ ಪಲ್ಲಕ್ಕಿಯನ್ನು ಮಾಡಿಸಿದ್ದಾರೆ ! ಮುದ್ದಾದ ರಾಯರ ಮಠ. ಪ್ರಶಾಂತ ವಾತಾವರಣವಿದೆ ! ತಪೋಯೋಗ್ಯವಾದ ನಿರ್ಮಲ ಪ್ರದೇಶ.

## ದೊಡ್ಡ ಬಳ್ಳಾಪುರದಲ್ಲಿ ಗುರುರಾಜರು !

ಯಾತ್ರೆಯ ಉದ್ದೇಶದಿಂದಲ್ಲದೆ, ಪ್ರವಾಸದಲ್ಲಿದ್ದಾಗಲೂ ಸಮೀಪದಲ್ಲಿರುವ ಪುಣ್ಯಕ್ಷೇತ್ರಗಳಿಗೆ ಹೋಗಿಬರುವುದು, ಮುಖ್ಯ ನಗರಗಳಲಿರ್ಪ ರಾಯರ ಮಠಕ್ಕೆ ಹೋಗಿ ಗುರುರಾಜರ ಹಾಗೂ ಇತರ ಯತೀಂದ್ರರ ದರ್ಶನ ಪಡೆಯುವುದು ನನಗೆ ಪದ್ಧತಿಯಾಗಿದೆ.

ಮಿತ್ರರಾದ **ಶ್ರೀ ಪಿ. ಎಸ್. ನಂಜುಂಡರಾಯರ** ಸಂಗಡ ಅವರ ಸ್ವಗ್ರಾಮವಾದ ದೊಡ್ಡಬಳ್ಳಾಪುರಕ್ಕೆ ನಾನೂ ಹೋಗಬೇಕಾಯಿತು. ಆಗ ಇಬ್ಬರೂ ಸೇರಿ ನೂತನವಾಗಿ ನಿರ್ಮಾಣವಾದ ಶ್ರೀ ರಾಯರ ಮಠಕ್ಕೆ ಹೋದೆವು. ಅರ್ಚಕರಾದ **ಶ್ರೀ ರಾಜಾಚಾರ್ಯರನ್ನು** ಕಂಡೆವು. ಶ್ರೀ ಗುರುರಾಜರ ಭಕ್ತರನ್ನು ಕಂಡರೆ ಯಾರಿಗೆ ತಾನೆ ಸಂತೋಷವಾಗಲಿಕ್ಕಿಲ್ಲ. ಆಚಾರ್ಯರು

ತಮ್ಮಲ್ಲಿಗೆ ರಾಯರು ಬಂದದ್ದು, ಪ್ರತಿಷ್ಠೆ ನಡೆದದ್ದು, ದಿನೇ ದಿನೇ ಅಭಿವೃದ್ಧಿ ಹೊಂದುತ್ತಿರುವ ಶ್ರೀ ಮಠದ ಕಟ್ಟಡದ ಬಗ್ಗೆ ವಿವರವಾಗಿ ತಿಳಿಸಿದರು. ನಾವು ಆಸಕ್ತಿಯಿಂದ ಕೇಳಿದೆವು.

ಅನಂತರ ಶ್ರೀ ರಾಯರ ದರ್ಶನ ಪಡೆದವು. ಫಲ, ಮಂತ್ರಾಕ್ಷತೆಯನ್ನು ಸ್ವೀಕರಿಸಿದೆವು.

ಮುದ್ದಾದ ರಾಯರ ಮಠ. ಮಠದಲ್ಲಿ ಮುದ್ದಾದ ರಾಯರು. ಇಲ್ಲಿ ಶ್ರೀ ಟೀಕಾಚಾರ್ಯರ ಬೃಂದಾವನವು ಪ್ರತಿಷ್ಠಿತವಾಗಿದೆ. ಸನ್ನಿಧಾನದಲ್ಲಿ ಪ್ರತಿದಿನ ಸಚ್ಛಾಸ್ತ್ರ ಪಾರಾಯಣ; ಅಭಿಷೇಕ; ಪೂಜೆ; ನೈವೇದ್ಯ; ಮಂಗಳಾರತಿ ಕಾಲಕಾಲಕ್ಕೆ ಸಕ್ರಮವಾಗಿ, ತೃಪ್ತಿಕರವಾಗಿ ನಡೆಯುತ್ತವೆ. ಭಕ್ತರಿಗೆ ಆನಂದವಾಗುತ್ತಿದೆ! ಶಿಸ್ತು, ಸಂಯಮ, ಸಾಂಪ್ರದಾಯಗಳನ್ನು ಪಾಲಿಸುತ್ತಾ ಗುರುರಾಜರ ಪ್ರೀತಿಗೆ ಪಾತ್ರರಾಗುವುದಲ್ಲದೆ ಶ್ರೀ ರಾಜಾ ಚಾರ್ಯರು, ಭಕ್ತಜನರ ವಿಶ್ವಾಸಾದರ, ಗೌರವಗಳನ್ನು ಸಂಪಾದಿಸಿರು ವುದು ಅಭಿನಂದನೀಯವಾಗಿದೆ!

## ಮಹಾನಗರದಲ್ಲಿ ಮಂತ್ರಾಲಯ ಪ್ರಭುಗಳು

ಬೆಳೆಯುತ್ತಿರುವ ಮಹಾನಗರವಾದ ಬೆಂಗಳೂರಿನಲ್ಲಿ ಗುರುರಾಜರ ಶಾಖಾ ಬೃಂದಾವನಗಳು ಹತ್ತಾರು ಪ್ರದೇಶಗಳಲ್ಲಿರುವುದನ್ನು ಕಾಣುವೆವು. ಅವು, ಚಿಕ್ಕಪೇಟೆ, ಚಾಮರಾಜಪೇಟೆ, ಮಲ್ಲೇಶ್ವರ, ರಾಜಾಜಿನಗರ, ರಾಘವೇಂದ್ರಕಾಲೋನಿ, ಜಯನಗರ ಮುಂತಾದ ಭಾಗಗಳಲ್ಲಿ ಪ್ರತಿಷ್ಠಿತವಾಗಿವೆ. ಎಲ್ಲಾ ಕಡೆಯು ಪೂಜಾದಿಗಳು ಸಕ್ರಮವಾಗಿ, ತೃಪ್ತಿಕರ ವಾಗಿ ನಡೆಯುತ್ತವೆ. ಶ್ರೀ ಸೀತಾಪತಿ ಅಗ್ರಹಾರದಲ್ಲಿರುವ ಬೃಂದಾ ವನವು ಸಾಕಷ್ಟು ಪುರಾತನವಾದದ್ದಾದರೂ, ಈಚೆಗೆ ಮಠವನ್ನು ನವೀನ ಪದ್ಧತಿಗಳಿಗನುಸರಿಸಿ ನಿರ್ಮಿಸಲಾಗಿದೆ. ಭಕ್ತರು ಹೆಚ್ಚು ಹೆಚ್ಚಾಗಿ ಬಂದು

ರಾಯರ ಸೇವೆಯನ್ನು ಮಾಡುತ್ತಿರುವುದನ್ನು ಕಾಣುವೆವು. ಅದರಲ್ಲಿ ಆಗರ್ಭ ಶ್ರೀಮಂತರು, ಉನ್ನತಾಧಿಕಾರಿಗಳು, ಸಾಮಾನ್ಯವಾಗಿ ಬರುತ್ತಲೇ ಇರುವರು.

ಹೆಚ್ಚು ಜನರ ಮೆಚ್ಚುಗೆಗೆ ಪಾತ್ರವಾದ ಸೀತಾಪತಿ ಅಗ್ರಹಾರದ ರಾಯರ ಮಠದಲ್ಲಿ ಸೇವೆಗಳು ಹೆಚ್ಚಾಗಿ ನಡೆಯುವವು. ವಾರದಲ್ಲಿ ಒಂದೆರ ಡಾದರೂ **ಕನಕಾಭಿಷೇಕಗಳು,** ಆರೆಂಟು **ಸರ್ವಸೇವೆಗಳು** ನೂರಾರು **ಪಂಚಾಮೃತಾಭಿಷೇಕಗಳು, ಹಸ್ತೋದಕಗಳೂ** ಜರುಗುತ್ತಲಿವೆ. ಇದೆಲ್ಲವು ಶ್ರೀ ರಾಯರ ಸುಖ ಪ್ರಾರಬ್ಧವಲ್ಲವೇ ? ಶ್ರೀ ಬೃಂದಾವನದ ಹಾಗೂ ಉತ್ಸವಮೂರ್ತಿಯನ್ನಲಂಕರಿಸುವುದರಲ್ಲಿ, ಜನರ ಮೆಚ್ಚುಗೆಯನ್ನು ಪಡೆದಿರುವ ಅರ್ಚಕರಾದ **ಶ್ರೀ ಸೇತುಮಾಧವಾಚಾರ್ಯರು** ನಿಜವಾಗಿಯು ಸುಕೃತಿಗಳು.

ಇಲ್ಲಿ ಸೇವಾ ಕರ್ತೃಗಳಿಗೆ, ಭಕ್ತರಿಗೆ ತೀರ್ಥಪ್ರಸಾದ, ಫಲವಿನಿಯೋಗ ಕ್ರಮಬದ್ಧವಾಗಿ ತೃಪ್ತಿಕರವಾಗಿ ನಡೆಯುತ್ತಿದೆ. ಇದೊಂದು ವೈಶಿಷ್ಟ್ಯಪೂರ್ಣ ವಾದ ಪ್ರಗತಿ. ಇದು ಅಭಿನಂದನೀಯವಾದುದು. ಇದಕ್ಕೆ ಕಾರಣರಾದ, ಆಡಳಿತೆಯನ್ನು ದಕ್ಷತೆಯಿಂದ ನಡೆಸಿ, ಶಿಸ್ತು ಸಂಯಮಗಳನ್ನನುಸರಿಸುತ್ತಿರುವ ಮಾನ್ಯ **ಶ್ರೀ ಹಾವೇರಿ ಶ್ರೀನಿವಾಸಾಚಾರ್ಯರು** ಪ್ರಶಂಸಾರ್ಹರು. ಇದರಿಂದಾಗಿ ಶ್ರೀ ರಾಯರ ಭಕ್ತರು ಸಂತೋಷಪಡುವುದಲ್ಲದೆ ಶ್ರೀ ರಾಯರು ಸತ್ಯವಾಗಿಯು ಪ್ರೀತರಾಗುವುದರಲ್ಲಿ ಸಂದೇಹವಿಲ್ಲ !

## ಚಿಕ್ಕಮಗಳೂರಿನಲ್ಲಿ ಶ್ರೀ ಗುರುಸಾರ್ವಭೌಮರು

ಚಿಕ್ಕಮಗಳೂರು ನಿವಾಸಿಗಳಾದ **ಶ್ರೀ ಟಿ. ಶ್ರೀನಿವಾಸರಾಯರು** B.A.L.L.B., ಸುಪ್ರಸಿದ್ಧ ನ್ಯಾಯವಾದಿಗಳು. ಆಗರ್ಭ ಶ್ರೀಮಂತರು ಶ್ರೀ ಹರಿವಾಯು ಗುರುಗಳ ಕೃಪೆಗೆ ಪಾತ್ರರಾದ ಸಾತ್ವಿಕರು, ಇವರಿಗೆ ಶ್ರೀ ಹರಿಯು

ಸಂತಾನ ಸಂಪತ್ಪರಿಶುದ್ಧ ಭಕ್ತಿ ವಿಜ್ಞಾನ ವಾಗ್ದೇಹ ಸುಪಾಟ ವಗಳನ್ನು ದಯಪಾಲಿಸಿರುತ್ತಾನೆ. ಆದರೆ ಇತ್ತೀಚಿಗೆ ಇವರಿಗೆ ನೈವೇದ್ಯ ವನ್ನುಣ್ಣುವ ಭಾಗ್ಯವಿಲ್ಲದಾಯಿತು. ವ್ಯಾಧಿಯು ಉಲ್ಬಣಾವಸ್ಥೆಗೆ ಬಂದಿತು. ನಿಪುಣರಾದ ವೈದ್ಯರು ಕೈಬಿಟ್ಟರು. ಆಗ ಇವರು ಶ್ರೀ ಮಂತ್ರಾಲಯ ಪ್ರಭು ಗಳನ್ನೆ ಶರಣುಪೊಕ್ಕರು.

ಧರ್ಮಪತ್ನಿಯವರಾದ ಶ್ರೀಮತಿ ಲಲಿತಮ್ಮನವರು ಸೂಚಿಸಿದಂತೆ ಶ್ರೀನಿವಾಸರಾಯರು ಗುರುರಾಜರ ಸೇವೆಯನ್ನು ಮಾಡಿ ಭವರೋಗ ವೈದ್ಯ ರಾದ ಶ್ರೀ ಗುರುಸಾರ್ವಭೌಮರನ್ನು ಪ್ರಸನ್ನೀಕರಿಸಿಕೊಂಡರು. ಔಷಧೋಪ ಚಾರಗಳಿಲ್ಲದೆ ವ್ಯಾಧಿಯು ಗುಣವಾಯಿತು! ಸಂಕಲ್ಪದಂತೆ ಸೇವೆಯನ್ನು ಮುಗಿಸಿ ಮಂತ್ರಾಲಯದಿಂದ ಸ್ವಸ್ಥಲವಾದ ಚಿಕ್ಕಮಗಳೂರಿಗೆ ಹಿಂದಿರುಗಿ ದರು. ಮರಳಿ ಬಂದ ನಂತರ ವೈದ್ಯರಿಂದ ಪರೀಕ್ಷೆ ಪಡೆದರು. ಉಲ್ಬಣಾವಸ್ಥೆ ಯಲ್ಲಿದ್ದ ವ್ಯಾಧಿಯು ಗುಣವಾಗಿ ಪ್ರಾಣಾಪಾಯವಿಲ್ಲದಿರುವಿಕೆಯನ್ನು ಕಂಡು ವೈದ್ಯರು ಸಂಭ್ರಮಾಶ್ಚರ್ಯಚಕಿತರಾಗಿ, ರಾಯರು ಸಾಧಿಸಿದ ಪ್ರಗತಿಯನ್ನಭಿ ನಂದಿಸಿ, ಮಾನವಾತೀತವಾದ ದೈವಿಕಶಕ್ತಿಯು ರೋಗಗ್ರಸ್ತರಾದ ಶ್ರೀನಿವಾಸರಾಯರನ್ನು ರಕ್ಷಿಸಿತೆಂದು ನುಡಿದರು.

ಲಕ್ಷ್ಮಾಧೀಶರ ದೃಷ್ಟಿಯಲ್ಲಿ ಶ್ರೀಮಂತರೆನಿಸಿದ ಶ್ರೀ ಶ್ರೀನಿವಾಸರಾಯರು ಶ್ರೀ ಗುರುರಾಜರ ಅಂತರಂಗ ಭಕ್ತರಾದರು. ಅವರಿಗೆ ಶ್ರೀ ರಾಯರ ದರ್ಶನ ಪ್ರತಿದಿನವೂ ಪಡೆಯಬೇಕೆಂಬ ಸಂಕಲ್ಪ ಮೂಡಿತು. ಸಾಧ್ವಿ ಶ್ರೀಮತಿ ಲಲಿತಮ್ಮನವರ ವತ್ತಾಯದಿಂದ, ಸೋದರರಾದ ಶ್ರೀ ರಾಮರಾಯರು, ಅವರ ಶ್ರೀಮತಿಯರಾದ ಶಾಂತಾಬಾಯಿಯವರ ಸಹಕಾರ ಸೌಹಾರ್ದಗಳಿಂದ ಶ್ರೀ ಗುರು ಸಾರ್ವಭೌಮರನ್ನು ಚಿಕ್ಕಮಗಳೂರಿಗೆ ಕರೆಸಿಕೊಂಡರು.

ಆಯುರ್ವೇದ ವೈದ್ಯರಿಂದ, ಹಾಗು ವಿನೂತನ ವೈದ್ಯಕೀಯ ಸಾಧನ ಸಾಮಗ್ರಿಗಳಿಂದ ಗುಣವಾಗದ ತಮ್ಮ ವ್ಯಾಧಿಯು ಶ್ರೀ ಗುರು ಸಾರ್ವಭೌಮರ

ಪಾದೋದಕದಿಂದ ಗುಣವಾದುದು ಆಶ್ಚರ್ಯವಲ್ಲವೇ ? ಆಗರ್ಭ ಶ್ರೀಮಂತರು ಮನಸ್ಸು ಮಾಡಿದರೆ ಏನು ತಾನೆ ಸಾಧ್ಯವಾಗಲಿಕ್ಕಿಲ್ಲ ? ಬಹು ಶೀಘ್ರದಲ್ಲಿಯೇ ಶ್ರೀ ರಾಯರ ಮಠವು ಒಂದು ಲಕ್ಷ ರೂಪಾಯಿಗಳಿಗೂ ಮೇಲ್ಪಟ್ಟ ವೆಚ್ಚದಿಂದ ಇತರರ ಸಹಾಯವನ್ನಪೇಕ್ಷಿಸದೇ ಶ್ರೀನಿವಾಸರಾಯರಿಂದ ನಿರ್ಮಾಣವಾಯಿತು !

ಭವ್ಯ ವಿಶಾಲವಾದ ರಾಯರ ಮಠ. ಮಠದಲ್ಲಿ ಮುದ್ದಾದ ಶ್ರೀ ಗುರುರಾಜರ ಬೃಂದಾವನ. ಈ ಶಾಖಾ ಬೃಂದಾವನದ ಪ್ರತಿಷ್ಠೆಯು, ಮಂತ್ರಾಲಯದಲ್ಲಿ ಶ್ರೀ ರಾಯರ ಬೃಂದಾವನದ ಅರ್ಚಕರಾದ ಶ್ರೀ ಅರ್ಚಕ ರಾಘವೇಂದ್ರಾಚಾರ್ಯರ ಅಮೃತ ಹಸ್ತದಿಂದ 17–6–67ನೇ ದಿವಸ ಬಹು ವಿಜೃಂಭಣೆಯಿಂದ ಜರುಗಿತು !

ಬೃಂದಾವನ ನಿರ್ಮಾಣ, ಪ್ರತಿಷ್ಠೆ ಒಂದು ಘಟ್ಟ. ಅದರ ಪೂಜೆ, ಹಸ್ತೋದಕದ ಏರ್ಪಾಟು ಮತ್ತೊಂದು ಸಮಸ್ಯೆ. ಶ್ರೀನಿವಾಸರಾಯರು ಈ ವಿಷಯದಲ್ಲಿ, ಯೋಗ್ಯರಾದ ಶ್ರೀ ಗುರುರಾಜಾಚಾರ್ಯರನ್ನು ವೈಸೂರಿನಿಂದಾ ಕರೆಸಿಕೊಂಡು ಸಕುಟುಂಬವಾಗಿ ಚಿಕ್ಕಮಗಳೂರಿನಲ್ಲಿ ನೆಲೆಸಲು, ವಸತಿ ಸೌಕರ್ಯಗಳನ್ನೂ ಮಾಡಿರುತ್ತಾರೆ ! ವಸತಿಗಾಗಿ ಮನೆಯನ್ನು ಕಟ್ಟಿಸಿಕೊಡುವುದಲ್ಲದೆ, ಜೀವನಕ್ಕಾಗಿ ಮಾಸವೇತನವನ್ನು ಕೊಟ್ಟು ಶ್ರೀ ರಾಯರ ನಿತ್ಯ ಹಸ್ತೋದಕಕ್ಕಾಗಿ ಪ್ರತ್ಯೇಕವಾಗಿ ಹಣವನ್ನು ಕೊಟ್ಟು, ಪೂಜೆ ಹಸ್ತೋದಕಗಳು, ಕ್ರಮವಾಗಿ, ತೃಪ್ತಿಕರವಾಗಿ ಸದಾ ನಡೆಯಲು ಕಾರಣರಾಗಿರುತ್ತಾರೆ !

ಚಿಕ್ಕಮಗಳೂರು ಪ್ರವಾಸದಲ್ಲಿ ನಾನು 7-8-69 ಗುರುವಾರ ಶ್ರೀಮಠಕ್ಕೆ ಹೋಗಿ ಶ್ರೀ ರಾಯರ ದರ್ಶನ ಪಡೆದು ಅನಂತರ ಮಠದ ಪಕ್ಕದಲ್ಲೇ ವಾಸವಾಗಿರುವ ಶ್ರೀ ಶ್ರೀನಿವಾಸರಾಯರನ್ನು ಕಂಡು ಮಾತನಾಡಿದೆ. ಸರಳ ಹೃದಯದ ರಾಯರು, ರಾಯರ ಮಠದ ಕಟ್ಟಡದ ವಿವರಗಳನ್ನು ತಿಳಿಸಲು ನಿರಾಕರಿಸಿ ಎರಡೇ ಮಾತಿನಲ್ಲಿ,

"ರಾಯರು ತಮ್ಮ ಮಠವನ್ನು ತಾವೇ ಕಟ್ಟಿಸಿಕೊಂಡರು. ಆದರೆ, ಅದಕ್ಕೆ ತಮ್ಮ ಸೌಭಾಗ್ಯವತಿಯೆ ಮುಖ್ಯ ಕಾರಣ"ವೆಂದು ತಿಳಿಸಿದರು.

ಸಿರಿಯು ಮನೆಯ ಮೂಲೆಯಲ್ಲಿದ್ದಾಳೆ ! ಶಾರದೆಯು ಅಂಗಳದಲ್ಲಿ ನಾಟ್ಯವಾಡುತ್ತಾಳೆ ! ಹೀಗಿದ್ದೂ ಶ್ರೀನಿವಾಸರಾಯರು ನಿರಾಡಂಬರರೆಂದರೆ ಆಶ್ಚರ್ಯವಲ್ಲವೆ ? ಸಜ್ಜನರ, ಸಾತ್ವೀಕರ ಲಕ್ಷಣವೇ ಹೀಗೆ ! ಆಗರ್ಭ ಶ್ರೀಮಂತ ರಾದ ಶ್ರೀನಿವಾಸರಾಯರು ಶ್ರೀ ಗುರು ಸಾರ್ವಭೌಮರಿಗೆ ಶಾಶ್ವತವಾದ ಮಹಾಸೇವೆಯನ್ನು ಮಾಡಿ ಚರಿತಾರ್ಥರಾದರು.

## ಹೊನ್ನಾಳಿಯಲ್ಲಿ ಶ್ರೀ ರಾಘವೇಂದ್ರರು

ಮಂತ್ರಾಲಯ ಪ್ರಭುಗಳ ಬಹು ಪುರಾತನ ಶಾಖಾ ಬೃಂದಾವನಗಳ ಪೈಕಿ ಒಂದು ಶಿವಮೊಗ್ಗಾ ಜಿಲ್ಲೆಯ ಹೊನ್ನಾಳಿಯಲ್ಲಿರುತ್ತದೆ ! ತುಂಗ ಭದ್ರಾನದೀತೀರದಲ್ಲಿ ಪ್ರಶಾಂತವಾತಾವರಣ. ವಿಶಾಲವಾದ ರಾಯರ ಮಠ. ಮುದ್ದಾದ ವೃಂದಾವನ. ವೈಭವೋಪೇತವಾದ ಪೂಜೆ, ಭಕ್ತಿ ಪುರಸ್ಸರವಾದ ಸೇವೆ. ಜಾಗ್ರತೆಯಾಗಿ ಫಲ ದೊರಕುವ ಸ್ಥಳ.

ಮಂತ್ರಾಲಯ ಪ್ರಭುಗಳನ್ನು ಮಕ್ಕಳಿಗಾಗಿ ಸೇವೆ ಮಾಡುವವರನೇಕರು. ಶ್ರೀಮತಸ್ಥರೂ ರಾಯರನ್ನಾಶ್ರಯಿಸಿರುವುದು ನೋಡುವೆವು. ಸಂಪನ್ನ ಅದ್ವೈತ ಗೃಹಸ್ಥರೊಬ್ಬರು, ಹೊನ್ನಾಳಿ ತಾಲ್ಲೂಕಿನ ಬಸವಾಪಟ್ಟಣವಾಸಿಗಳು ರಾಯರ ಸೇವೆ ಮಾಡಿ, ಮಗನನ್ನು ಪಡೆದರು. ಅವನಿಗೆ ರಾಘವೇಂದ್ರನೆಂದು ನಾಮಕರಣ ಮಾಡಿದರು. ದೊಡ್ಡವನಾದನು. ಪಾರ್ಶ್ವವಾಯುವು ಬಂದಿತು. ನಡೆಯಲು ಕಾಲಿಲ್ಲದಾಯಿತು ! ಮಹಾತ್ಮರ ದಯೆಯಿಂದ ಹುಟ್ಟಿದ ಮಗನು ಮನೆಯಲ್ಲಿ ಬಾಧೆಪಡುವುದು ನೋಡಿ ಮಾತಾಪಿತೃಗಳಿಗೆ ಸಂಕಟವಾಯಿತು !

ರಾಘವೇಂದ್ರನು ಗುರುರಾಜರನ್ನೇ ನಂಬಿದನು. ಭಕ್ತಿಯಿಂದ ಸೇವೆ ಮಾಡಿದನು. ಒಂದು ದಿನ ಬೆಳಗಿನ ಝಾವ ಸ್ವಪ್ನದಲ್ಲಿ ರಾಯರ ದರ್ಶನವಾಯಿತು ! ಹುಡುಗನ ಕಾಲಿಗೆ ಕಬ್ಬಿಣದ ಕಡಗವನ್ನು ಹಾಕಿದ್ದರು. ತೆಗೆಯಲು ಬಾರದೆ ಅವನಿಗೆ ಹೆಚ್ಚು ನೋವಾಗಿದ್ದಿತು ! ಗುರುರಾಜರು ಆ ಕಡಗವನ್ನು ತೆಗೆದರು. ರಾಘವೇಂದ್ರನನ್ನು ಹಿಡಿದುಕೊಂಡು ನಡೆಸಿದರು. ಅನಂತರ ಅವನಿಗೆ ಅಭಯವಿತ್ತು. ಮಂತ್ರಾಕ್ಷತೆ ಕೊಟ್ಟು ಆಶೀರ್ವದಿಸಿ ಅದೃಶ್ಯ ರಾದರು.

ರಾಘವೇಂದ್ರನು ಎದ್ದು ನೋಡುತ್ತಾನೆ ಕಾಲಲ್ಲಿ ಕಡಗವಿಲ್ಲ. ಕೈಯಲ್ಲಿ ಮಂತ್ರಾಕ್ಷತೆ ಇದೆ. ಅನಾಯಾಸವಾಗಿ ಎದ್ದು ಓಡಾಡಿದ. ಮಾತಾಪಿತೃಗಳಿಗೆ ನಡೆದ ಘಟನೆ ವಿವರಿಸಿದ. ಅವರಿಗೆ ಆನಂದಾನಂದವಾಯಿತು ! ಬೆಳಿಗ್ಗೆ ಎಲ್ಲರೂ ಬಂದು ರಾಘವೇಂಪ್ರನನ್ನು ನೋಡಿ ಆಚ್ಚರಿಪಟ್ಟರು !

## ಹನುಮಂತರಾಯರಿಗೆ ಕಣ್ಣಿತ್ತರು

ಶ್ರೀ ಬಿ. ಕೆ. ಗುರುರಾಜರಾಯರು ಬಳ್ಳಾರಿಯಲ್ಲಿ ಸುಪ್ರಸಿದ್ಧ ನ್ಯಾಯವಾದಿಗಳು. ಗಾಂಧೀನಗರದಲ್ಲಿ ಲಂಕಾಪಟ್ಟಣದಷ್ಟು ದೊಡ್ಡ ಮನೆ. ಸ್ವಗ್ರಾಮವಾದ ಭೂಪಸಮುದ್ರವು ರಾಯದುರ್ಗ ತಾಲ್ಲೂಕಿಗೆ ಸೇರಿದೆ. ಮೊದಲು ಬಳ್ಳಾರಿ ಜಿಲ್ಲೆಯಲ್ಲಿದ್ದು ಈಗ ಅನಂತಪುರಮಂಡಲದಲ್ಲಿದೆ. ಆ ಗ್ರಾಮದ ಕುಲಕರ್ಣಿಗಳವರು. ಆಗರ್ಭ ಶ್ರೀಮಂತರು.

ಶ್ರೀ ಗುರುರಾಜರಾಯರ ಜ್ಯೇಷ್ಠಪುತ್ರರಾದ ಶ್ರೀ ಹನುಮಂತರಾಯರು ನಮ್ಮ ಮಿತ್ರರು. ಗುರುರಾಜರ ಭಕ್ತರು. ಆಡಮಾನ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಾ ಬಳ್ಳಾರಿಯಲ್ಲಿದ್ದರು. ಇವರಿಗೆ ನಲವತ್ತು ವರ್ಷಗಳ ವಯಸ್ಸು. ಎರಡು ಕಣ್ಣುಗಳಿಗೂ ಪರೆ ಬೆಳೆದು, ಕಣ್ಣು ಕಾಣದಾಯಿತು. ಅಂಥಸ್ಥ

ಬಂದಿತು. ವೃದ್ಧಾಪ್ಯದಲ್ಲಿ ಮಾತಾಪಿತೃಗಳಿಗೆ ಮಕ್ಕಳೇ ಕಣ್ಣೆಂಬರು. ಪ್ರಾಯದಲ್ಲಿರುವ ದುಡಿಯುವ ಮಗನಿಗೆ ಕಣ್ಣು ಕಾಣದಾಯಿತು ! ತಾಯಿಗೆ ದುಃಖವಾಯಿತು. ಮಗನ ದುರವಸ್ಥೆ ದುಸ್ಸಹ, ವರ್ಣನಾತೀತವೆಂಬುದು ಹೇಳಬೇಕೆ ?

ಬಳ್ಳಾರಿಯಲ್ಲಿ ಸುಪ್ರಸಿದ್ಧ ನೇತ್ರವೈದ್ಯರಾದ **ಶ್ರೀ ದೊಡ್ಡಿ** ಪ್ರಹ್ಲಾದ ರಾಯರಲ್ಲಿಗೆ ಹನುಮಂತರಾಯರು ನೇತ್ರ ಪರೀಕ್ಷೆಗೆ ಹಾಜರಾದರು. ಕಣ್ಣು ಗುಡ್ಡೆಗೆ ಪರೆ ಬೆಳೆದಿದೆ. ಶಸ್ತ್ರ ಚಿಕಿತ್ಸೆ ಆಗಬೇಕು ! ಆದರೆ ಕಾಲಾವಕಾಶವಿದೆ, ಎಂದು ನುಡಿದರು. ಹೀಗೆ ಎರಡು, ಮೂರು ಸಲ ಪರೀಕ್ಷೆ ಮಾಡಿ, ಪಕ್ವ ವಾಗಿಲ್ಲ. ಇನ್ನೂ ಕೆಲಕಾಲ, ಆರು ತಿಂಗಳಾದರೂ ಆಗಬೇಕೆಂದರು. ಹನುಮಂತರಾಯರು ಮನೆಗೆ ಬಂದರು. ಅಂಧತ್ವವನ್ನು ಎರಡು ವರ್ಷ ಅನುಭವಿ ಸಿದೆ. ಇನ್ನು ಕಣ್ಣು ಬರುವುದು ಯಾವಾಗಲೋ ಏನೋ ! ಜೀವನವೇ ಬೇಡವೆನಿಸಿದೆ ! ಏನು ಮಾಡಲಿ ! ಎಂಬುದಾಗಿ ತಾಯಿಯವರ ಮುಂದೆ ಕುಳಿತು ಗೊಳೋ ಎಂದು ಕಣ್ಣೀರು ಸುರಿಸಿದರು. ಮಾನವ ಮಾತ್ರರು ಮಾಡುವುದೇನಿದೆ ! ಮಾತೃವಾತ್ಸಲ್ಯ ದೊಡ್ಡದಲ್ಲವೇ ! ಮಗನನ್ನು ಹಿತನುಡಿ ನುಡಿದು ಸಂತೈಸಿದರು.

ಹನುಮಂತರಾಯರಿಗೆ ಕಣ್ಣು ಕಾಣದಾದವು. ಪರಾಧೀನವಾಯಿತು ಜೀವನ ! ರಾಯರ ಸೇವೆಯನ್ನೆಂತು ಮಾಡಬಲ್ಲರು. ಹೀಗಿರಲು, ಅವರತಾಯಿ ಯವರಾದ **ಕಮಲಮ್ಮ**ನವರು, ತಮ್ಮ ಮನೆಯಲ್ಲಿ ಶ್ರೀ ಗುರುರಾಜರ ಚಿತ್ರ ಪಟವನ್ನಿಟ್ಟು, ಶ್ರದ್ಧಾಭಕ್ತಿಗಳಿಂದ ಮಗನಿಗಾಗಿ ರಾಯರ ಸೇವೆ ಮಾಡಿದರು. ಒಂದೇ ವಾರದಲ್ಲಿ ರಾಯರು ಪ್ರಸನ್ನರಾದರು. ಕಮಲಮ್ಮನವರಿಗೆ ಸ್ವಪ್ನದಲ್ಲಿ ದರ್ಶನವಿತ್ತು ಹನುಮಂತರಾಯರಿಗೆ ಕೊಡಲು ಕನ್ನಡಕವಿತ್ತರು. ಬೆಳಗ್ಗೆ ಮಗನನ್ನು ಕರೆದು, ರಾಯರ ಸ್ವಪ್ನವೃತ್ತಾಂತವನ್ನು ತಿಳಿಸಿ, ಚಿಂತಿಸಬೇಕಾಗಿಲ್ಲ ವೆಂದು ಹೇಳಿ ಧೈರ್ಯದಿಂದಿರಲು ತಿಳಿಸಿದರು ಕಮಲಮ್ಮನವರು.

ಮರುದಿನ ಹನುಮಂತರಾಯರು ನೇತ್ರ ಪರೀಕ್ಷೆಗಾಗಿ ಶ್ರೀ ದೊಡ್ಡಿ ಪ್ರಹ್ಲಾದರಾಯರಲ್ಲಿಗೆ ಬಂದರು. ವೈದ್ಯರು ರೋಗಿಯನ್ನು ಪರೀಕ್ಷಿಸಿ, ಆರು ತಿಂಗಳಾದರೂ ಕಾಯಬೇಕಾದ ಪರಿಸ್ಥಿತಿಯಲ್ಲಿದ್ದ ಕಣ್ಣು ಪರೆ, ಪರಿಪಕ್ವವಾಗಿದೆ! ಅಚಿರಕಾಲದಲ್ಲಿಯೇ ಪಕ್ವದೆಶೆಗೆ ಬಂದಿರುವುದು ಆಶ್ಚರ್ಯ, ದೈವಾನುಗ್ರಹ ಬಲ ವೆಂದು ನುಡಿದು ಶಸ್ತ್ರ ಚಿಕಿತ್ಸೆ ನಡೆಸಿದರು. ಎರಡು ದಿನಗಳ ನಂತರ ಎರಡನೇ ಕಣ್ಣಿಗೂ ಚಿಕಿತ್ಸೆ ನಡೆಯಿತು! ಹನುಮಂತರಾಯರಿಗೆ ದೃಷ್ಟಿ ಬಂದಿತು! ಕುರುಡನಿಗೆ ಕಣ್ಣು ಬಂದಾಗ ಆಗುವ ಆನಂದವನ್ನು ವರ್ಣಿಸಲಾದೀತೇ? ತಾಯಿಯ ಸೇವೆ ಫಲಿಸಿತು! ಮಗನ ಸುಕೃತ ವಿಶೇಷವಲ್ಲವೇ?

ಅನಂತರ ಶ್ರೀ ಹನುಮಂತರಾಯರು, ತಮ್ಮ ಸೋದರರೊಂದಿಗೆ, ಸೋದರ ಮಾವನವರಾದ ಡಾಕ್ಟರ್, ಆಲೂರು ವೆಂಕೋಬರಾಯರನ್ನು ಕರೆದುಕೊಂಡು ಮಂತ್ರಾಲಯಕ್ಕೆ ಹೊರಟರು. ಪೀಠಸ್ಥರಾದ ಶ್ರೀಗಳಿಗೆ ಪಾದಪೂಜೆ ಮಾಡಿದರು. ಶ್ರೀ ಗುರುರಾಜರಿಗೆ ಸರ್ವ ಸೇವೆಮಾಡಿಸಿ, ಬಂಗಾರದ ಕಣ್ಣುಗಳನ್ನು ಕುಂಡಲಗಳನ್ನು ಸಮರ್ಪಿಸಿ ತೀರ್ಥಪ್ರಸಾದ ಗಳನ್ನು ಸ್ವೀಕರಿಸಿ ಬಳ್ಳಾರಿಗೆ ಹಿಂದಿರುಗಿದರು.

ಶ್ರೀ ಬಿ. ಕೆ. ಹನುಮಂತರಾಯರೀಗ ತಮ್ಮ ಸ್ವಗ್ರಾಮವಾದ ಭೂಪ ಸಮುದ್ರದಲ್ಲಿ ಆರೋಗ್ಯದಿಂದ, ಕೊರತೆ ಇಲ್ಲದೆ ಇರುತ್ತಾರೆ! ಇವರದು ಅವಿ ಭಕ್ತ ಕುಟುಂಬ ಸೋದರರೆಲ್ಲರೂ ಗುರುರಾಜರ ಭಕ್ತರರು. ನಯ, ವಿನಯಾದಿ ಸುಗುಣ ಸಂಪನ್ನರು.

ಹನುಮಂತರಾಯರಿಗೆ ಕಣ್ಣು ಬಂದಿದ್ದು ಕಳೆದ ದಶಕದಲ್ಲಿ. ಈಗ ಅವರ ದೃಷ್ಟಿ ಮಾಮೂಲಿನಂತಿದೆ, ತೊಂದರೆ ಇಲ್ಲ.

## ವಾಂತಿ ನಿಂತಿತು - ಅನ್ನ ದಕ್ಕಿತು !

ಶ್ರೀ ಬಿ. ಕೆ. ಹನುಮಂತರಾಯರ ಸೋದರಮಾವಂದಿರಾದ ಶ್ರೀ **ಆಲೂರು ವೆಂಕೋಬರಾಯರು** ಆಯುರ್ವೇದ ವೈದ್ಯರು. ಬಳ್ಳಾರಿಯಲ್ಲಿ ಪಟೇಲ ನಗರನಿವಾಸಿಗಳು. ಇವರ ತಮ್ಮ ಕೃಷ್ಣ **ಮೂರ್ತಿರಾವ್.** ತಮ್ಮನ ಮಗನಾದ **ವಿಜಯ ವಿಠಲನಿಗೆ** ಈಗ 20 ವರ್ಷಗಳು. ಅವನಿಗೆ 14ನೇ ವಯಸ್ಸಿನಲ್ಲಿ ಹಬ್ಬದ ಊಟ ಮಾಡಿದ ನಂತರ ವಾಂತಿಯಾಯಿತು. ಬಿಸಿಲು ಕಾಲದಲ್ಲಿ ಹೀಗೆ ಅವನಿಗೆ ತಿಂದದ್ದು ಜೀರ್ಣವಾಗದೇ ವಾಂತಿಯಾಗುವುದು ನೋಡಿ ಮಾತಾಪಿತೃಗಳಿಗೆ ಸಂಕಟವಾಯಿತು ! ಹೀಗೆ ನಾಲ್ಕು ವರ್ಷಗಳುರುಳಿದವು. ವೈದ್ಯಕೀಯ ಚಿಕಿತ್ಸೆ ನಡೆದು ಮುಗಿಯಿತು. ಉತ್ತಮ ವೈದ್ಯರಾದ ವೆಂಕೋಬರಾಯರಿಗೆ (ದೊಡ್ಡಪ್ಪನಿಗೆ) ಶೋಚದಂತಾಯಿತು ! ಮಾಡುವುದೇಸಿದೆ ಮಂತ್ರಾಲಯ ಪ್ರಭುಗಳೇ ಗತಿ !

ವಿಜಯ ವಿಠಲನ ತಾಯಿ **ರಾಧಾಬಾಯಿ** ಮಗನನ್ನು ಕರೆದುಕೊಂಡು ಮಂತ್ರಾಲಯಕ್ಕೆ ಪಯಣವಾದಳು. ಭಕ್ತಿಯಿಂದ ಮಂಡಲಪರ್ಯಂತ ರಾಯರ ಸೇವೆ ಮಾಡಿದಳು. ಮಗನಿಗೆ ಅವಲಕ್ಕಿ ಕೊಟ್ಟಳು. ಜೀರ್ಣವಾಯಿತು. ವಾಂತಿಯಾಗಲಿಲ್ಲ. ಅನಂತರ ಹಸ್ತೋದಕದ ನೈವೇದ್ಯ ಕೊಟ್ಟರು. ರಾಯರ ಪಾದೋದಕವನ್ನು ನೀರಿನಲ್ಲಿ ಬೆರಸಿ ಕುಡಿಸಿದರು. ಅನ್ನವೂ ದಕ್ಕಿತು ! ಹೊಟ್ಟೆ ತುಂಬಾ ಉಂಡರೆ ವಾಂತಿಯಾಗುವ ಸೂಚನೆ ಕಂಡಿತು ! ಆಗ ಶ್ರೀಮತಿ ರಾಧಾಬಾಯಿಯು, ಶ್ರೀ ರಾಯರ ಅರ್ಚಕರಾದ ರಾಘವೇಂದ್ರಾಚಾರ್ಯರನ್ನು ಕಂಡು, ವಿಷಯವನ್ನು ಕೂಲಂಕುಷವಾಗಿ ತಿಳಿಸಿ; ಪರಿಹಾರೋಪಾಯವನ್ನು ಬೇಡಿದಳು. ಆಗ ಆಚಾರ್ಯರು, ಗುರುಮಂತ್ರೋಪದೇಶವನ್ನು ಮಾಡಿ, ೩೨೦೦೦ ಜಪ ಮಾಡಲು ತಿಳಿಸಿದರು.

ರಾಧಾಬಾಯಿಯು, ಸಂಕಲ್ಪದಂತೆ ರಾಯರ ಸೇವೆ ಒಂದು ಮಂಡಲದವರೆಗೂ ಮಾಡಿ, ಮಂತ್ರಾಲಯದಿಂದ ಬಳ್ಳಾರಿಗೆ ಮಗನೊಡನೆ ಹಿಂತಿರುಗಿ

ದರು. ಮಂತ್ರಜಪವನ್ನು ದೀಕ್ಷೆಯಿಂದ ಮಾಡಿದರು. ಮನೆಯಲ್ಲಿ ಶ್ರೀರಾಯರಿಗೆ ಹಸ್ತೋದಕ ಮಾಡಿ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನಮಾಡಿಸಿದರು.

ವಿಜಯ ವಿಠಲನೀಗ ಪೂರ್ಣಾರೋಗ್ಯವಂತನಾಗಿ, ವಾಂತಿಯ ತೊಂದರೆ ಇಲ್ಲದೆ ಸುಖವಾಗಿರುತ್ತಾನೆ! ತಾಯಿಯ ಶ್ರಮ ಫಲಿಸಿತು! ಮಗನ ವ್ಯಾಧಿ ಮಾಯವಾಯಿತು! ಮಂತ್ರಾಲಯ ಪ್ರಭುಗಳ ಮನಸ್ಸಿಗೆ ಬಂದರೆ ತಡವಾದೀತೇ?

## ಕಟ್ಟಡದ ನಿಧಿಗೆ ೫೦೧ ರೂಪಾಯಿಗಳು

ಅಪ್ಪಾಶಾಸ್ತ್ರಿ ಗೋವಿಂದಶಾಸ್ತ್ರಿ ಮೊರಬ. (ಎ. ಜಿ. ಮೊರಬ) ಇವರೀಗ ಬಳ್ಳಾರಿ ಜಿಲ್ಲಾ ಶಿರುಗುಪ್ಪೆಯಲ್ಲಿ ಸಹಕಾರ ಇಲಾಖೆಯಲ್ಲಿ ಕೆಲಸ ಮಾಡುತ್ತಲಿದ್ದಾರೆ! ಇವರ ಮಗ ಅನಂತನಿಗೆ ೨೪ ವರ್ಷ ವಯಸ್ಸು. ಮಗನ ಆರೋಗ್ಯವು ಕೆಟ್ಟಿತು. ವೈದ್ಯರು ಪರೀಕ್ಷೆ ನಡೆಸಿದರು. 'X'ರೇ ತೆಗೆದರು. ಅವನಿಗೆ ಅಪೆಂಡಿಸೈಟಿಸ್' ಎಂಬುದಾಗಿ ನಿಶ್ಚಯವಾಯಿತು! ಶಸ್ತ್ರ ಚಿಕಿತ್ಸೆ ಅಗತ್ಯವಾಯಿತು. ಕೆ. ಎಂ. ಸಿ. ಆಸ್ಪತ್ರೆ ಹುಬ್ಬಳ್ಳಿಗೆ ಪ್ರಯಾಣವಾದರು. ನಿಪುಣರಾದ ವೈದ್ಯರು ಪರೀಕ್ಷೆ ಮಾಡಿ ಶಸ್ತ್ರಚಿಕಿತ್ಸೆ ಆಗಲೇಬೇಕೆಂದು ತಿಳಿಸಿದರು.

ಮೊರಬ ಅವರು ಮಗನನ್ನು ಮಂತ್ರಾಲಯಕ್ಕೆ ಹೋಗಿಬರಲು ತಿಳಿಸಿದರು. ರಾಯರ ದರ್ಶನ ಪಡೆದು ಬಂದ ನಂತರ ಚಿಕಿತ್ಸೆ ಪಡೆಯುವುದಾಗಿ ಹೇಳಿದರು. ಅನಂತನು ಮಂತ್ರಾಲಯವನ್ನು ಸೇರಿದ. ರಾಯರ ದರ್ಶನ ಪಡೆದ. ತೀರ್ಥಪ್ರಸಾದ ಸ್ವೀಕರಿಸಿ ವಿಶ್ರಾಂತಿ ಪಡೆದ. ಕೋಣೆಯಲ್ಲಿ ಮಲಗಿದ್ದಾನೆ! ರಾಯರ ದರ್ಶನವಾಯಿತು. ರೂಮಿನಲ್ಲಿ ಜ್ಯೋತಿ ಬೆಳಗಿತು. 'ಮೊರಬ' ಬರಲಿಲ್ಲವೇ ಎಂದು ಕೇಳಿದರು ರಾಯರು. ಅನಂತನಿಗೆ ಎಚ್ಚರವಾಯಿತು! ಗುರುರಾಜರನ್ನು ಸ್ಮರಿಸಿಕೊಂಡು ಹುಬ್ಬಳ್ಳಿಗೆ ಪಯಣವಾದ.

ಮರುದಿನ ಆಸ್ಪತ್ರೆಯಲ್ಲಿ ಶಸ್ತ್ರಚಿಕಿತ್ಸೆಗಾಗಿ ಹಾಜರಾದ ಅನಂತನನ್ನು ವೈದ್ಯರು ಪರೀಕ್ಷೆ ನಡೆಸಿ, ಬೇನೆಯ ಲಕ್ಷಣವನ್ನೆ ಕಾಣದೆ ಚಕಿತರಾದರು. ಶಸ್ತ್ರಚಿಕಿತ್ಸೆ ಅನವಶ್ಯಕವೆಂದು ನುಡಿದರು. ಅನಂತನು ಅಲ್ಲಿಂದ ಹೊರಟು ಸಿನೆಮಾಕ್ಕೆ ಹೋದನು. ತಂದೆಯವರಾದ ಮೊರಬ ಬಂದು ಮಗನಿಗಾಗಿ ಕಾಯುತ್ತಿದ್ದರು. ಅನಂತರ ಬಂದ ಅನಂತ ಆದ್ಯಂತ ವಿವರಗಳನ್ನು ತಂದೆಗೆ ತಿಳಿಸಿದರೂ ಮೊರಬ ನಂಬಲಿಲ್ಲ. ಮಗನು ಶಸ್ತ್ರಚಿಕಿತ್ಸೆಗೆ ಹೆದರಿರಬೇಕೆಂದು ಭಾವಿಸಿ ಮತ್ತೊಮ್ಮೆ ವೈದ್ಯರಲ್ಲಿ ಹೋಗಿ ಕೇಳಿದರು. ಅಪೆಂಡಿಸೈಟಿಸ್ ಲಕ್ಷಣವೇ ಇಲ್ಲ. ಹುಡುಗ ಲಕ್ಷಣವಾಗಿದ್ದಾನೆ ! ಹೋಗಿ ಬಾ ಎಂದರು ವೈದ್ಯರು. ಎಲ್ಲಾ ಶ್ರೀ ರಾಯರ ಮಹಿಮೆ ಎಂದು ಮೊರಬರವರು ಗುರುರಾಜರನ್ನು ಕೊಂಡಾಡಿದರು.

ಮಗನ ರೋಗ ಚಿಕಿತ್ಸೆ ಇಲ್ಲದೇ ಗುಣಪಡಿಸಿದ ಗುರುರಾಜರ ದರುಶನಕ್ಕಾಗಿ ಮೊರಬ ಮಂತ್ರಾಲಯಕ್ಕೆ ಬಂದರು. ರಾಯರ ದರ್ಶನ ಪಡೆದು ತೀರ್ಥಪ್ರಸಾದ ಸ್ವೀಕರಿಸಿ ಮಠದಲ್ಲಿ ಒಂದು ಮೂಲೆಯಲ್ಲಿ ವಿಶ್ರಾಂತಿ ಪಡೆದರು. ಮಧ್ಯಾಹ್ನದ ವೇಳೆ ಎಚ್ಚರವಾಯಿತು. ಎದ್ದು ನೋಡುತ್ತಾರೆ ಧೌತವಸ್ತ್ರವು ಮಲಿನವಾಗಿದೆ. ನದಿಗೆ ಹೊರಟರು. ಸ್ನಾನ ಮಾಡಿ ಬಂದರು. ಶ್ರೀಗಳವರನ್ನು ಕಂಡು ಸಾಷ್ಟಾಂಗ ಪ್ರಣಾಮ ಮಾಡಿ ಹೀಗೆ ವಿಜ್ಞಾಪಿಸಿದರು. "ಗುರುಗಳೇ ವಿಶ್ರಾಂತಿ ಪಡೆಯುವಾಗ ಸ್ವಪ್ನವಾಯಿತು. ತಾವು ಆ ಕಟ್ಟೆಯ ಮೇಲೆ ಕುಳಿತು ಮೊರಬಾ ! ಬಾ ! ಎಂದು ಕರೆದಿರಿ. ಸ್ನಾನ ಮಾಡಿ ಬಂದಿದ್ದೇನೆ! ತಾವು ಕುಳಿತ ಜಾಗದಲ್ಲಿ ಈಗ ಮಠದ ಕಟ್ಟಡ ಪುನಃ ನಿರ್ಮಿಸಲು ಕೆಡವಿದ್ದಾರೆ ! ಗುರುರಾಜರು, ನನ್ನ ಮಗನ ಬೇನೆಯನ್ನು ಚಿಕಿತ್ಸೆಗಳಿಲ್ಲದೆ ಗುಣಪಡಿಸಿದರು. ಮೂಲವ್ಯಾಧಿಯಿಂದಾ ಬಾಧೆಪಡುತ್ತಿದ್ದ ನನಗೂ ಆರೋಗ್ಯ ಕರುಣಿಸಿರುತ್ತಾರೆ ! ಮಹಾತ್ಮರಾದ ಮಂತ್ರಾಲಯ ಪ್ರಭುಗಳ ಮಹಾಪೀಠದಲ್ಲಿ ಬಂದ ಮಹಾನುಭಾವರು ತಾವು. ನಾವು ಅಲ್ಪರು. ನಮ್ಮಿಂದ ರಾಯರಿಗೆ ಸೇವೆ ಸಲ್ಲಬೇಕಾಗಿದೆ ! ಏನು ಮಾಡಲಿ ! ಎಷ್ಟು ಹಣ ಬೇಕಾಗುವುದು, ಎಂಥಾ ಸೇವೆ ಮಾಡಬೇಕು ! ಅಪ್ಪಣೆಯಾಗಲಿ" ಎಂದು ನುಡಿದರು.

ಪೀಠಸ್ಥರಾದ ೧೦೮ ಶ್ರೀ ಸುಜಯೀಂದ್ರತೀರ್ಥರಾಗ ಮಂದಹಾಸದಿಂದ, ಮೊರಬಾ ಅವರೇ ಶ್ರೀ ರಾಯರ ಮಹಿಮೆ ಅಗಮ್ಯವಾದುದು. ಯಾರಿಗೆ ಏನನ್ನು ಅನುಗ್ರಹಿಸುತ್ತಾರೊ ! ಯಾರಿಂದ ಎಂತಹ ಸೇವೆ ಸ್ವೀಕರಿಸುವರೋ ತಿಳಿಯದಾಗಿದೆ ! ನಮಗೇ ಆಶ್ಚರ್ಯವಾಗಿದೆ ! ತಮಗೆ ಗುರುರುರಾಜರು ಅನುಗ್ರಹಿಸಿದ್ದಾರೆ ! ಮಠದಲ್ಲಿ ಶ್ರೀಗಳು ಕುಳಿತ ಭಾಗವು ಕಟ್ಟಡದಲ್ಲಿದೆ. ಎಂದರೆ ಕಟ್ಟಡದ ನಿಧಿಗೆ ನಿಮಗೆ ಕೈಲಾದಷ್ಟು ಸಹಾಯ ಮಾಡಿ ಎಂದಪ್ಪಣೆ ಇತ್ತರು.

ಅನಂತರ ಮೊರಬ ಶಿರುಗುಪ್ಪೆಗೆ ಬಂದು ನೋಡಿದರು. ತಮ್ಮಲ್ಲಿ ಪ್ರತ್ಯೇಕವಾಗಿಟ್ಟ ಹಣ ೫೦೦ ರೂಪಾಯಿಯಿತ್ತು. ಅದನ್ನು ತೆಗೆದುಕೊಂಡು ಮಂತ್ರಾಲಯಕ್ಕೆ ಬಂದರು. ಶ್ರೀ ಗುರುರಾಜರ ಮಠದ ಕಟ್ಟಡದ ನಿಧಿಗೆ ಶ್ರೀ ೫೦೧ ರೂಪಾಯಗಳನ್ನು ಸಲ್ಲಿಸಿದರು. ಇದು ಜೂನ್ 1970ರಲ್ಲಿ ನಡೆದದ್ದು.

## ಗುರುರಾಜರು ನಡೆದು ಬಂದರು

ಚಿತ್ರದುರ್ಗ ಜಿಲ್ಲೆಯ, ಮೊಣಕಾಲ್ಮುರು ತಾಲ್ಲೂಕಿಗೆ ಸೇರಿದ ಹಳ್ಳಿ ಶಿರೇಕೊಳ್ಳ. ಆ ಹಳ್ಳಿಯು ಬಳ್ಳಾರಿಗೆ 12 ಮೈಲಿ ದೂರದಲ್ಲಿದೆ. ಬಸ್ಸು ರೈಲುಗಳ ಸೌಕರ್ಯವಿದೆ. ಅಲ್ಲಿಯ ಶ್ಯಾನಭೋಗರಾದ ಹಿರೇಮಧ್ವರಾಯರು ಶ್ರೀ ಗುರುರಾಜರ ಭಕ್ತರು. ರಾಯರ ಕೃಪೆಗೆ ಪಾತ್ರರಾದ ಸಾತ್ವಿಕರು. ವಯೋವೃದ್ಧರು. ಮಂತ್ರಾಲಯಕ್ಕೆ ಹೋಗಿ ಶ್ರೀ ರಾಯರ ದರ್ಶನ ಪಡೆದು. ವಯೋಧರ್ಮಕ್ಕನುಗುಣವಾಗಿ ಇಂದ್ರಿಯ ಪಟುತ್ವ ಕುಗ್ಗಿತು. ದಾರ್ಢ್ಯ ಸಾಲದಾಗಿದೆ. ಮುಂದಿನ ವರ್ಷ ಮಂತ್ರಾಲಯಕ್ಕೆ ಬರಲಾರೆ ! ಇದೇ ನನಗೆ ರಾಯರ ಕೊನೆಯ ದರ್ಶನವೆಂದು ಪೇಚಾಡಿಕೊಂಡು ರಾಯರ ಬೃಂದಾವನದ ಮುಂದೆ ಕೈಜೋಡಿಸಿ ನಿಂತು ಪ್ರಾರ್ಥಿಸಿದರು !

ಭಕ್ತವತ್ಸಲರು, ಕರುಣಾಸಮುದ್ರರೂ ಅಪೇಕ್ಷಿತ ಪ್ರದಾತರಾದ ಶ್ರೀ ರಾಘವೇಂದ್ರರು, ಮಧ್ವರಾಯನಿಗೆ ದರ್ಶನವಿತ್ತು, ರಾಯ ಚಿಂತಿಸಬೇಡ, ನಾವೇ ನಿಮ್ಮಲ್ಲಿಗೆ ಬರುವೆವು. ಹಿಂದಿರುಗಿ ನೋಡಬೇಡ. ನಡೆ ಎಂದರು. ವರ್ಣನಾತೀತವಾದ ಅಮಂದಾನಂದದಿಂದ ಪುಲಕಿತಗಾತ್ರರಾದ ಮಧ್ವರಾಯರು ಮಂತ್ರಾಲಯದಿಂದ ಪ್ರಯಾಣವಾದರು. ನಡೆದು ಬಂದರು. ಹಿಂದೆ ರಾಯರು ಬರುವ ಕಾಲ ಸಪ್ಪಳವಾಯಿತು. ತಿರುಗಿನೋಡಬಾರದಾಗಿ ಕಟ್ಟಪ್ಪಣೆ ಮಾಡಿದ್ದರಲ್ಲವೆ ಮಹಾತ್ಮರು ?

ಮಧ್ವರಾಯರು ಶಿರೇಕೊಳ್ಳ ಸೇರಿದರು. ತಮ್ಮ ಮನೆಯೊಳಗೆ ಬಂದರು. ನಡುಮನೆ ಸೇರಿ ತಿರುಗಿ ನೋಡಿದರು. ರಾಯರ ಶಾಟಿಕೆ ಕಂಡಿತು. ರಾಯರು ಅದೃಶ್ಯರಾದರು. ಬೆಳಗಿನ ಝಾವ ಸ್ವಪ್ನವಾಯಿತು. ತಾವು ನಡುಮನೆಯಲ್ಲಿರುವುದಾಗಿ ತಿಳಿಸಿ ಮನೆಯನ್ನು ಖಾಲೀ ಮಾಡಲು ಹೇಳಿದರು ಮಧ್ವರಾಯರಿಗೆ ! ಬೆಳಗ್ಗೆ ಅಲ್ಲಿ ನೋಡಿದರೆ, ದಂಡಕಾಷ್ಠ, ಫಲ ಮಂತ್ರಾಕ್ಷತೆ, ಶಾಟಿಕೆ, ಪಾದುಕಗಳು ಕಂಡುಬಂದವು. ಸ್ವಪ್ನದಲ್ಲಿ ಸೂಚಿಸಿದಂತೆ, 2 ಮೈಲಿ ದೂರದಲ್ಲಿರುವ ದಾಸಮಾನಗುಡ್ಡದಲ್ಲಿ ಭೂಮಿ ಬಿರುಕುಬಿಟ್ಟಿತ್ತು. ಅಲ್ಲಿ ಹೂವು, ತುಳಸಿ, ಮಂತ್ರಾಕ್ಷತೆ ದೊರೆತವು. ಶ್ರೀ ಪ್ರಹ್ಲಾದರಾಜರು ಯಜ್ಞಮಾಡಿದ ಹೋಮ ಕುಂಡದ ಬಂಡೆಯನ್ನು ತಂದು ಬೃಂದಾವನ ನಿರ್ಮಾಣ ಮಾಡಿದರು.

ಬೃಂದಾವನಕ್ಕೆ ಸೂಚಿಸಿದ ಬಂಡೆಯು ಸಾಲದಾಯಿತು. ಯೋಚಿಸುತ್ತಿರಲು ಮತ್ತೆ ಸ್ವಪ್ನವಾಯಿತು. ಅಡ್ಡಅಡ್ಡವಾಗಿಟ್ಟ ಬಂಡೆಯನ್ನು ಉದ್ದುದ್ದವಾಗಿಡಬೇಕೆಂದು ಸೂಚನೆಯಾಯಿತು. ಹಾಗೆ ಮಾಡಲು ಮುದ್ದಾದ ಬೃಂದಾವನವು ಸಿದ್ಧವಾಯಿತು. ಆ ಸಮಯಕ್ಕೆ ಸರಿಯಾಗಿ ಓರ್ವ ಬಾವಾಜಿಯು 750 ಸಾಲಗ್ರಾಮಗಳನ್ನು ತಂದುಕೊಟ್ಟನು. ಅವುಗಳನ್ನು ಬೃಂದಾವನದಲ್ಲಿ ಹಾಕಿ ಪ್ರತಿಷ್ಠೆ ಮಾಡಿದರು. ಶ್ರೀ ಗುರುಸಾರ್ವಭೌಮರು ಹಿರೇ ಮಧ್ವರಾಯರ ಹಿಂದೆ ನಡೆದುಬಂದುದು ಶ್ರೀಮುಖ ಶ್ರಾವಣ ಶುದ್ಧ ೧೫ ಗುರುವಾರ ಕ್ರಿ. ಶ 1735 ಇಂದಿಗೆ ಎರಡು ನೂರಾ ಮೂವತ್ತೈದು ವರ್ಷಗಳು

ತುಂಬುವವು. ಇದೊಂದು ಪುರಾತನ ಬೃಂದಾವನ ಜಾಗ್ರತ ಸ್ಥಲ ! ಕ್ಷಿಪ್ರದಲ್ಲಿ ಫಲ ದೊರೆಯುವುದು.

ನಾನು ಪ್ರವಾಸದಲ್ಲಿ 9-8-70ಕ್ಕೆ ನಮ್ಮ ಸೋದರತ್ತೆಯವರಾದ ಪದ್ಮಾವತಮ್ಮನನ್ನು ಶತವೃದ್ಧಳನ್ನು ನೋಡಲು ಕುಡತನಿಗೆ ಹೋಗಿದ್ದೆ. ಕುಶಲ ಪ್ರಶ್ನೆಗಳ ನಂತರ ಅವರ ಹಿರೇಮಗನಾದ ಹನುಮಂತಾಚಾರ್ಯರು

"ನೀನು ಬರೆದ ರಾಯರ ಚರಿತ್ರೆಗಳನ್ನೋದಿದೆ, ಅದರಲ್ಲಿ ಶಿರೇಕೊಳ್ಳದ ಪ್ರಸಂಗವೇ ಬಂದಿಲ್ಲ. ರಾಯರು ನಡೆದು ಬಂದಿದ್ದಾರೆ !" ಎಂದರು.

"ಮಂತ್ರಾಲಯ ಪ್ರಭುಗಳು" - ಗ್ರಂಥಮುದ್ರಣವು ಮುಕ್ತಾಯ ಹಂತ ದಲ್ಲಿದೆ, 18-8-70ಕ್ಕೆ ಬಿಡುಗಡೆ ಆಗಬೇಕಾಗಿದೆ, ಸಾಧ್ಯವಾದರೆ, ವಿವರಗಳನ್ನು ಶೇಖರಿಸಿ ಸೇರಿಸುತ್ತೇನೆ" ಎಂಬುದಾಗಿ ಹೇಳಿದೆ, ನಾವು ನಿಮಿತ್ತಮಾತ್ರರು !

ಮರುದಿವಸ ಗುರುಗಳಾದ ಶ್ರೀ ಘೂಳೀ ಕೃಷ್ಣಮೂರ್ತಿ ಆಚಾರ್ಯರ ಮನೆಯಲ್ಲಿ ಪವಮಾನಹೋಮದ ಪ್ರಯುಕ್ತ ನನಗೆ ಕರೆಬಂದಿತ ! ಅಂದು ಅಲ್ಲಿಗೆ ಶಿರೇಕೊಳ್ಳದ ರಾಯರ ಅರ್ಚಕರಾದ ಶ್ರೀ ವ್ಯಾಸರಾಯಾಚಾರ್ಯರು ಬಂದರು. ಭೋಜನಾನಂತರ ರಾಯರು ನಡೆದು ಬಂದ ವಿಷಯ ತಿಳಿಸಿ, ಇದೇ ಮುದ್ರಣದಲ್ಲಿ ಸೇರಿಸಲು ಉಪಕರಿಸಿರುತ್ತಾರೆ ! ಅಲ್ಲದೆ, ಶ್ರೀ ಭಾಗವತಾ ಮೃತ, ಶ್ರೀ ಭಾರತಾಮೃತಾದಿ ಮಹಾಕಾವ್ಯ ಕರ್ತೃಗಳಾದ, ಭಾಗವತರತ್ನಂ, ವಿದ್ವಚ್ಛಿರೋಮಣಿಃ ವಿದ್ವಾನ್ ಘೂಳೀ ಕೃಷ್ಣ ಮೂರ್ತ್ಯಾಚಾರ್ಯರು ಬಳ್ಳಾರಿ ಇವರು ಶಿರೇಕೊಳ್ಳದ ರಾಯರ ಮಹಾತ್ಮ್ಯೆಯನ್ನು ಬರೆದಿರುವುದಾಗಿಯು, ಇದೇ ಸಾಧಾರಣದ ಶ್ರೀ ರಾಯರ ಆರಾಧನೆಗೆ ಸಿದ್ಧವಾಗುವುದಾಗಿಯೂ ತಿಳಿಸಿದರು. ಪ್ರಯತ್ನವಿಲ್ಲ, ಕಾಲಾವಕಾಶ ವಿಲ್ಲ, ಹೀಗಿದ್ದೂ ನಾನು ರಚಿಸಿದ ಗುರುಚರಿತ್ರೆಯಲ್ಲಿ ನಡೆದು ಬಂದ ರಾಯರ ವಿಷಯವನ್ನು ಸೇರಿಸಿ ಮುದ್ರಿಸಲು ಸಾಧ್ಯವಾಯಿತೆಂದರೆ ರಾಯರ ಮಹಿಮೆ

ಎಂದೇ ಭಾವಿಸಬೇಕು ! ನಡೆದು ಬಂದ ರಾಯರ ವಿಷಯವನ್ನು ಸಮಗ್ರವಾಗಿ, ಶೀಘ್ರದಲ್ಲಿಯೇ ಬರಲಿರುವ ಭಾಗವತೋತ್ತಮರ ಅಮರ ಚರಿತೆಯನ್ನು ಭಾಗವತರತ್ನರ ಅಮೃತ ವಾಣಿಯಲ್ಲಿ ಸವಿಯೋಣ !

## ಉಪಸಂಹಾರ

ಮಂತ್ರಾಲಯ ಪ್ರಭುಗಳ ಚರಿತ್ರೆಯನ್ನು ಬರೆಯುವುದು, ವರ್ಣಿಸುವುದೆಂದರೆ ಸಮುದ್ರಸ್ನಾನ ಸಂಕಲ್ಪವೇ ಸರಿ. ಗುರು ಸಾರ್ವಭೌಮರು ಕಾರಣ ಜನ್ಮರು. ಲೋಕಕಲ್ಯಾಣಾರ್ಥವಾಗಿಯೇ ಅವತಾರ ಮಾಡಿದರು, ಪಂಡಿತ, ಪಾಮರ ಜನೋದ್ಧಾರಕರಾಗಿದ್ದಾರೆ ! ಸ್ವರೂಪೋದ್ಧಾರಕರು. ಕರ್ಮಜ ದೇವತೆಗಳು. ಚತುಃಷಷ್ಠಿ ಕಲಾಕೋವಿದರು. ಪರ್ವತೋಪಾದಿಯಲ್ಲಿ ಅನಿಷ್ಟಪುಣ್ಯವನ್ನು ಸಂಪಾದಿಸಿದ್ದಾರೆ. ಸುಖಪ್ರಾರಬ್ಧವನ್ನನುಭವಿಸುತ್ತಾ ಭಕ್ತಜನ ಮಂದಾರರಾಗಿ, ಜಾತಿ ಮತ ಭೇದಗಳನ್ನೆಣಿಸದೆ ಭಜಕ ಜನರ ಮನೋಭೀಷ್ಟೆಗಳನ್ನೂ ಪೂರ್ಣಮಾಡುತ್ತಲಿದ್ದಾರೆ. ಇಂದಿಗೆ ರಾಯರು ಬೃಂದಾವನ ಪ್ರವೇಶ ಮಾಡಿ 299 ವರ್ಷಗಳು ತುಂಬಿದವು. 300ರಲ್ಲಿದ್ದೇವೆ. ಇನ್ನೂ ನಾಲ್ಕು ನೂರು ವರುಷಗಳವರೆಗೂ ಶ್ರೀ ರಾಯರು ಬೃಂದಾವನದಲ್ಲಿ ಸನ್ನಿಹಿತರಾಗಿದ್ದು ವಾಂಛಿತಪ್ರದರಾಗಿರುತ್ತಾರೆ ! ಇಂತಹ ಸುಸಂದರ್ಭದಲ್ಲಿ ಮಾನವ ಜನ್ಮವನ್ನು ಪಡೆದು, ರಾಯರ ಸೇವೆಯನ್ನು, ತನು, ಮನ, ಧನದಿಂದ ಮಾಡಿ ಕೃತಕೃತ್ಯರಾಗುವವರೇ ಧನ್ಯರು, ಭಾಗ್ಯಶಾಲಿಗಳು, ಸುಕೃತಿಗಳು.

ಶ್ರೀ ಗುರುರಾಜರು ಗೀತಾಪ್ರಿಯರು. ರಾಯರಿಗೆ ಪಲ್ಲಕೀ ಸೇವಾಕಾಲದಲ್ಲಿ ಸಂಗೀತ ಸೇವಾಕ್ಕೆ ಪ್ರತ್ಯೇಕವಾದ ಅವಕಾಶ ! ರಾಯರು ವೀಣಾ ಮನೆತನದವರು. ಗಾಂಧರ್ವ ವಿದ್ಯಾವಿಶಾರದರೆಂದೇ ಹೀಗೆ ನಡೆದಿದೆ !

**ಮಂತ್ರಾಲಯ ಪ್ರಭುಗಳು ಮಾನವ ಜನಾಂಗಕ್ಕೇ ಮಂಗಳವನ್ನುಂಟುಮಾಡಲಿ !**

## ಗುರುರಾಜರು ರಚಿಸಿದ ಕೃತಿರತ್ನಗಳು

1) ತತ್ವಮಂಜರಿ
2) ಮಂತ್ರಾರ್ಥ ಮಂಜರಿ
3) ಗೀತಾರ್ಥ ಮಂಜರಿ
4) ರಾಮಚಾರಿತ್ರ ಮಂಜರಿ
5) ಕೃಷ್ಣ ಚಾರಿತ್ರ ಮಂಜರಿ
6) ವೇದತ್ರಯವಿವೃತಿ
7) ತಂತ್ರದೀಪಿಕಾ
8) ಚಂದ್ರಿಕಾ ಪ್ರಕಾಶ
9) ಪ್ರಾತಃ ಸಂಕಲ್ಪ ಗದ್ಯ
10) ಸರ್ವಸಮರ್ಪಣ ಗದ್ಯ
11) ತಾತ್ಪರ್ಯ ನಿರ್ಣಯ ಭಾವಸಂಗ್ರಹ
12) ಭಾಟ್ಟ ಸಂಗ್ರಹ
13) ಗೀತಾರ್ಥ ಸಂಗ್ರಹ (ವಿವೃತಿ)
14) ಪರಿಮಳ
15) ನ್ಯಾಯ ಮುಕ್ತಾವಳಿ
16) ದಶೋಪನಿಷತ್ ಖಂಡಾರ್ಥ
17) ಗೀತಾತಾತ್ಪರ್ಯ ಟೀಕಾ ವಿವರಣೆ
18) ತತ್ವಪ್ರಕಾಶಭಾವದೀಪ
19) ವಾದಾವಲೀ ವ್ಯಾಖ್ಯಾ
20) ಪ್ರಮಾಣಪದ್ಧತಿ ವ್ಯಾಖ್ಯಾ
21) ತರ್ಕ ತಾಂಡವ ವ್ಯಾಖ್ಯಾ
22) ಪ್ರಮೇಯ ದೀಪಿಕಾ ವ್ಯಾಖ್ಯಾ
23) ಪುರುಷ ಸೂಕ್ತಾದಿ ಪಂಚ ಸೂತ್ರ ವ್ಯಾಖ್ಯಾ
24') ದಶಪ್ರಕರಣ ಟೀಕಾವ್ಯಾಖ್ಯ

# ಶ್ರೀ ಗುರುರಾಘವೇಂದ್ರ ನಕ್ಷತ್ರ ಮಾಲಿಕೆ

(ಕೊನೆಯ ಪದ್ಯ)

ಸೀ॥ ವೈಭವಯುತ ನಿತ್ಯ ಪರಿಚರ್ಯೆ ಮಾಡಲು
ಘನತೆಯ ಮಂತ್ರಿ ವೆಂಕಣ್ಣನಲ್ಲ!
ಘನವಾಗಿ ನಿನಮೇಲೆ ಕವಿತೆಯ ರಚಿಸಲು
ಸತ್ಕವಿ ಅಪ್ಪಣಾಚಾರ್ಯನಲ್ಲ!
ನಿರ್ಮಲ ಸದ್ಭಕ್ತಿ ನಿನಪಾದ ಸೇವಿಸಲ್
ದಾಸವರ್ಯ ಕನಕದಾಸನಲ್ಲ
ಕಾವ್ಯಗಳ್ ಸೃಷ್ಟಿಸಿ ಗೌರವ ಪಡೆಯಲು
ಪ್ರಾಜ್ಞಸನ್ನುತ ಶ್ರೀನಿವಾಸನಲ್ಲ!

ಗೀ॥ ಲಕ್ಷ್ಮಿದಯೆ ಕಾಣದಾದ ಬಾಲಕನು ನಾನು
ಸೀಸ ಸುಮಮಾಲೆ ನಿಮಗಿತ್ತೆ ಭೂಸುರೇಂದ್ರ!
ರಕ್ಷಕನು ನೀನೆ! ದಯದೋರು ಭಿಕ್ಷುಕೇಂದ್ರ!
ರಮ್ಯಗುಣಸಾಂದ್ರ ಶ್ರೀ ಗುರುರಾಘವೇಂದ್ರ!

—ಜಿ. ಹೆಚ್. ಬಿ. ಆಚಾರ್ಯ

ಜಯವು ಪ್ರಹ್ಲಾದ! ಚಂದ್ರಿಕಾಚಾರ್ಯ! ಜಯವು
ಜೈ! ಪರಿಮಳಾರ್ಯ! ಜೈ ಗುರುಸಾರ್ವಭೌಮ!
ಜಯವು ಮಂತ್ರಾಲಯ ನಿವಾಸ! ಜೈ ಮುನೀಂದ್ರ!
ರಮ್ಯ ಗುಣಸಾಂದ್ರ! ಜಯ ಜಯ ರಾಘವೇಂದ್ರ!

ಮಂಗಳವು ರಾಘವೇಂದ್ರ! ವಿಭ್ರಾಜಿತೇಂದ್ರ!
ಮಂಗಳವು ಚಂದ್ರಿಕಾಚಾರ್ಯ! ಮಂಗಳಾಂಗ!
ಮಧ್ವಮತ ವಾರಿನಿಧಿ ಚಂದ್ರ! ಮೌನಿಚಂದ್ರ!
ರಮ್ಯ ಗುಣಸಾಂದ್ರ! ಮಂಗಳಂ ರಾಘವೇಂದ್ರ!

—o—

ತಾಯಿ ನರಸಾಂಬಿ - ಕೃಷ್ಣಾರ್ಯತನಯ ನಾನು
ಮಹಿತ ಕೌಶಿಕಗೋತ್ರ ಸಂಭವನು ನಾನು
ಭೀಮಕವಿ ನಾನು - ನಿಮ್ಮಯ ನಾಮಬಲದಿ
ರಚಿಸಿದೆನು ನಿಮ್ಮ ಚರಿತೆಯಂ - ರಾಘವೇಂದ್ರ!

ಶ್ರೀಮಧ್ವೇಶಾರ್ಪಣಮಸ್ತು – ಶ್ರೀ ಕೃಷ್ಣಾರ್ಪಣಮಸ್ತು.

ಬೆಂಗಳೂರು — ಜೆ. ಹೆಚ್. ಬಿ. ಆಚಾರ್ಯ

# ಶ್ರೀ ರಾಘವೇಂದ್ರ ಸ್ತೋತ್ರ

ಶ್ರೀಪೂರ್ಣಬೋಧಗುರುತೀರ್ಥಪಯೋಬ್ಧಿಪರಾ
ಕಾಮಾರಿಮಾಕ್ಷವಿಷಮಾಕ್ಷಶಿರಸ್ಪೃಶಂತೀ
ಪೂರ್ವೋತ್ತರಾಮಿತತರಂಗಚರತ್ಸುಹಂಸಾ
ದೇವಾಲಿಸೇವಿತಪರಾಂಘ್ರಿಪಯೋಜಲಗ್ನಾ ॥ ೧ ॥

ಜೀವೇಶಭೇದಗುಣಪೂರ್ತಿಜಗತ್ಸುಸತ್ವ-
ನೀಚೋಚ್ಚಭಾವಮುಖನಕ್ರಗಣೈಃ ಸಮೇತಾ ॥
ದುರ್ವಾದ್ಯಜಾಪತಿಗಿಲೈರ್ಗುರುರಾಘವೇಂದ್ರ-
ವಾಗ್ದೇವತಾಸರಿದಮುಂ ವಿಮಲೀಕರೋತು ॥ ೨ ॥

ಶ್ರೀ ರಾಘವೇಂದ್ರಃ ಸಕಲಪ್ರದಾತಾ
ಸ್ವಪಾದಕಂಜದ್ವಯಭಕ್ತಿಮದ್ಭ್ಯಃ ॥
ಅಘಾದ್ರಿಸಂಭೇದನದೃಷ್ಟಿವಜ್ರಃ
ಕ್ಷಮಾಸುರೇಂದ್ರೋಽವತು ಮಾಂ ಸದಾಽಯಮ್ ॥ ೩ ॥

ಶ್ರೀರಾಘವೇಂದ್ರೋ ಹರಿಪಾದಕಂಜ
ನಿಷೇವಣಾಲ್ಲಬ್ಧಸಮಸ್ತ ಸಂಪತ್ ॥
ದೇವಸ್ವಭಾವೋ ದಿವಿಜದ್ರುಮೋಽಯ-
ಮಿಷ್ಟಪ್ರದೋ ಮೇ ಸತತಂ ಸ ಭೂಯಾತ್ ॥ ೪ ॥

ಭವ್ಯಸ್ವರೂಪೋ ಭವದುಃಖತೂಲ-
ಸಂಘಾಗ್ನಿಚರ್ಯಃ ಸುಖಧೈರ್ಯಶಾಲೀ ॥
ಸಮಸ್ತದುಷ್ಟಗ್ರಹನಿಗ್ರಹೇಶೋ
ದುರತ್ಯಯೋಪಪ್ಲವಸಿಂಧುಸೇತುಃ ॥ ೫ ॥

ನಿರಸ್ತದೋಷೋ ನಿರವದ್ಯವೇಷಃ
ಪ್ರತ್ಯರ್ಥಿಮೂಕತ್ವನಿದಾನಭಾಷಃ ॥
ವಿದ್ವತ್ ಪರಿಜ್ಞೇಯಮಹಾವಿಶೇಷೋ
ವಾಗ್ವೈಖರೀನಿರ್ಜಿತಭವ್ಯಶೇಷಃ ॥ ೬ ॥

ಸಂತಾನಸಂಪತ್ ಪರಿಶುದ್ಧ ಭಕ್ತಿ-
ವಿಜ್ಞಾನವಾಗ್ದೇಹಸುಪಾಟವಾದೀನ್ ॥
ದತ್ವಾ ಶರೀರೋತ್ಥಸಮಸ್ತದೋಷಾನ್
ಹತ್ವಾ ಸ ನೋಽವ್ಯಾದ್ ಗುರುರಾಘವೇಂದ್ರಃ ॥ ೭ ॥

ಯತ್ಪಾದೋದಕಸಂಚಯಃ ಸುರನದೀಮುಖ್ಯಾಪಗಾಸಾದಿತಾ-
ಸಂಖ್ಯಾನುತ್ತಮಪುಣ್ಯಸಂಘವಿಲಸತ್ ಪ್ರಖ್ಯಾತ ಪುಣ್ಯಾವಹಾಃ ॥
ದುಸ್ತಾಪತ್ರಯನಾಶನೋ ಭುವಿ ಮಹಾವಂಧ್ಯಾ ಸುಪುತ್ರಪ್ರದೋ
ವ್ಯಂಗಸ್ವಂಗಸಮೃದ್ಧಿದೋ ಗ್ರಹಮಹಾಪಾಪಾಪಹಸ್ತಂ ಶ್ರಯೇ
॥ ೮ ॥

ಯತ್ಪಾದಕಂಜರಜಸಾ ಪರಿಭೂಷಿತಾಂಗಾ
ಯತ್ಪಾದಪದ್ಮಮಧುಪಾಯಿತಮಾನಸಾ ಯೇ ॥
ಯತ್ಪಾದಪದ್ಮಪರಿಕೀರ್ತನಜೀರ್ಣವಾಚಃ
ತದ್ದರ್ಶನಂ ದುರಿತಕಾನನದಾವಭೂತಮ್ ॥ ೯ ॥

ಸರ್ವತಂತ್ರಸ್ವತಂತ್ರೋಽಸೌ ಶ್ರೀಮಧ್ವಮತವರ್ಧನಃ
ವಿಜಯೀಂದ್ರಕರಾಬ್ಜೋತ್ಥ ಸುಧೀಂದ್ರವರಪುತ್ರಕಃ ॥ ೧೦ ॥

ಶ್ರೀರಾಘವೇಂದ್ರೋ ಯತಿರಾಟ್ ಗುರುರ್ಮೇಸ್ಯಾದ್ ಭಯಾಪಹಃ
ಜ್ಞಾನಭಕ್ತಿ ಸುಪುತ್ರಾಯುರ್ಯಶಃಶ್ರೀಪುಣ್ಯವರ್ಧನಃ ॥ ೧೧ ॥

ಪ್ರತಿವಾದೀಜಯಸ್ವಾಂತಭೇದಚಿಹ್ನಾದರೋ ಗುರುಃ
ಸರ್ವವಿದ್ಯಾಪ್ರವೀಣೋऽನ್ಯೋ ರಾಘವೇಂದ್ರಾನ್ನವಿದ್ಯತೇ ॥ ೧೨ ॥

ಅಪರೋಕ್ಷೀಕೃತಶ್ರೀಶಃ ಸಮುಪೇಕ್ಷಿತಭಾವಜಃ
ಅಪೇಕ್ಷಿತಪ್ರದಾತಾऽನ್ಯೋ ರಾಘವೇಂದ್ರಾನ್ನವಿದ್ಯತೇ ॥ ೧೩ ॥

ದಯಾದಾಕ್ಷಿಣ್ಯವೈರಾಗ್ಯವಾಕ್‌ಪಾಟವಮುಖಾಂಕಿತಃ
ಶಾಪಾನುಗ್ರಹಶಕ್ತೋऽನ್ಯೋ ರಾಘವೇಂದ್ರಾನ್ನವಿದ್ಯತೇ ॥ ೧೪ ॥

ಅಜ್ಞಾನವಿಸ್ಮೃತಿಭ್ರಾಂತಿಸಂಶಯಾಪಸ್ಮೃತಿಕ್ಷಯಾಃ
ತಂದ್ರಾಕಂಪವಚಃಕೌಂಠ್ಯಮುಖಾ ಯೇ ಚೇಂದ್ರಿಯೋದ್ಭವಾಃ
ದೋಷಾಸ್ತೇ ನಾಶಮಾಯಾಂತಿ ರಾಘವೇಂದ್ರಪ್ರಸಾದತಃ ॥ ೧೫ ॥

ಓಂ ಶ್ರೀ ರಾಘವೇಂದ್ರಾಯ ನಮಃ ಇತ್ಯಷ್ಟಾಕ್ಷರಮಂತ್ರತಃ
ಜಪಿತಾದ್ಭಾವಿತಾನ್ನಿತ್ಯಮಿಷ್ಟಾರ್ಥಾಃ ಸ್ಯುರ್ನಸಂಶಯಃ ॥ ೧೬ ॥

ಹಂತು ನಃ ಕಾಯಜಾನ್ ದೋಷಾನಾತ್ಮಾತ್ಮೀಯ ಸಮುದ್ಭವಾನ್
ಸರ್ವಾನಪಿ ಪುಮರ್ಥಾಂಶ್ಚ ದದಾತು ಗುರುರಾತ್ಮವಿತ್ ॥ ೧೭ ॥

ಇತಿ ಕಾಲತ್ರಯೇ ನಿತ್ಯಂ ಪ್ರಾರ್ಥನಾಂ ಯಃ ಕರೋತಿ ಸಃ
ಇಹಾऽಮುತ್ರಾಪ್ತ ಸರ್ವೇಷ್ಟೋ ಮೋದತೇ ನಾತ್ರ ಸಂಶಯಃ ॥ ೧೮ ॥

ಅಗಮ್ಯ ಮಹಿಮಾ ಲೋಕೇ ರಾಘವೇಂದ್ರೋ ಮಹಾಯಶಾಃ
ಶ್ರೀಮಧ್ವಮತದುಗ್ಧಾಬ್ಧಿ ಚಂದ್ರೋऽವತು ಸದಾऽನಘಃ ॥ ೧೯ ॥

ಸರ್ವಯಾತ್ರಾಫಲಾವಾಪ್ತ್ಯೈ ಯಥಾಶಕ್ತಿ ಪ್ರದಕ್ಷಿಣಂ
ಕರೋಮಿ ತವ ಸಿದ್ಧಸ್ಯ ವೃಂದಾವನಗತಂ ಜಲಂ
ಶಿರಸಾ ಧಾರಯಾಮ್ಯದ್ಯ ಸರ್ವತೀರ್ಥಫಲಾಪ್ತಯೇ ॥ ೨೦ ॥

ಸರ್ವಾಭೀಷ್ಟಾರ್ಥಸಿದ್ಧ್ಯರ್ಥಂ ನಮಸ್ಕಾರಂ ಕರೋಮ್ಯಹಂ
ತವ ಸಂಕೀರ್ತನಂ ವೇದಶಾಸ್ತ್ರಾರ್ಥ ಜ್ಞಾನಸಿದ್ಧಯೇ || ೨೧ ||

ಸಂಸಾರೇಽಕ್ಷಯಸಾಗರೇ ಪ್ರಕೃತಿತೋಽಗಾಧೇ ಸದಾ ದುಸ್ತರೇ
ಸರ್ವಾವದ್ಯಜಲಗ್ರಹೈರನುಪಮೈಃ ಕಾಮಾದಿ ಭಂಗಾಕುಲೇ ||

ನಾನಾವಿಭ್ರಮದುರ್ಭ್ರಮೇಽಮಿತಭಯಸ್ತೋಮಾದಿಫೇನೋತ್ಕಟೇ
ದುಃಖೋತ್ಕೃಷ್ಟವಿಷೇ ಸಮುದ್ಧರ ಗುರೋಮಾಮಗ್ನರೂಪಂ ಸದಾ ||೨೨||

ರಾಘವೇಂದ್ರಗುರುಸ್ತೋತ್ರಂ ಯಃ ಪಠೇದ್ಭಕ್ತಿಪೂರ್ವಕಂ
ತಸ್ಯ ಕುಷ್ಠಾದಿರೋಗಾಣಾಂ ನಿವೃತ್ತಿಸ್ತ್ವರಯಾಭವೇತ್ || ೨೩ ||

ಅಂಧೋಽಪಿ ದಿವ್ಯದೃಷ್ಟಿಸ್ಸ್ಯಾದೇಡಮೂಕೋಽಪಿವಾಕ್ಪತಿಃ
ಪೂರ್ಣಾಯುಃ ಪೂರ್ಣಸಂಪತ್ತಿಃ ಸ್ತೋತ್ರಸ್ಯಾಸ್ಯ ಜಪಾದ್ಭವೇತ್ ||೨೪||

ಯಃ ಪಿಬೇಜ್ಜಲಮೇತೇನ ಸ್ತೋತ್ರೇಣೈವಾಭಿಮಂತ್ರಿತಂ
ತಸ್ಯ ಕುಕ್ಷಿಗತಾ ದೋಷಾಃ ಸರ್ವೇ ನಶ್ಯಂತಿ ತತ್ಕ್ಷಣಾತ್ || ೨೫ ||

ಯದ್ವೃಂದಾವನಮಾಸಾದ್ಯ ಪಂಗುಃ ಖಂಜೋಽಪಿವಾ ಜನಃ
ಸ್ತೋತ್ರೇಣಾನೇನ ಯಃ ಕುರ್ಯಾತ್ ಪ್ರದಕ್ಷಿಣ ನಮಸ್ಕೃತೀ
ಸ ಜಂಘಾಲುರ್ಭವೇದೇವ ಗುರುರಾಜ ಪ್ರಸಾದತಃ || ೨೬ ||

ಸೋಮಸೂರ್ಯೋಪರಾಗೇ ಚ ಪುಷ್ಯಾರ್ಕಾದಿ ಸಮಾಗಮೇ
ಯೋಽನುತ್ತಮಮಿದಂ ಸ್ತೋತ್ರಮಷ್ಟೋತ್ತರಶತಂ ಜಪೇತ್
ಭೂತಪ್ರೇತಪಿಶಾಚಾದಿಪೀಡಾ ತಸ್ಯ ನ ಜಾಯತೇ || ೨೭ ||

ಏತತ್ ಸ್ತೋತ್ರಂ ಸಮುಚ್ಚಾರ್ಯ ಗುರೋರ್ವೃಂದಾವನಾಂತಿಕೇ
ದೀಪಸಂಯೋಜನಾತ್ ಜ್ಞಾನಂ ಪುತ್ರಲಾಭೋ ಭವೇದ್ಧ್ರುವಂ ||೨೮||

ಪರವಾದಿಜಯೋ ದಿವ್ಯಜ್ಞಾನಭಕ್ತ್ಯಾದಿವರ್ಧನಂ
ಸರ್ವಾಭೀಷ್ಟಪ್ರವೃದ್ಧಿಃ ಸ್ಯಾನ್ನಾತ್ರ ಕಾರ್ಯಾವಿಚಾರಣಾ ॥ ೨೯ ॥

ರಾಜಚೋರಮಹಾವ್ಯಾಘ್ರಸರ್ಪನಕ್ರಾದಿ ಪೀಡನಂ
ನ ಜಾಯತೇಽಸ್ಯ ಸ್ತೋತ್ರಸ್ಯ ಪ್ರಭಾವಾನ್ನಾತ್ರ ಸಂಶಯಃ ॥ ೩೦ ॥

ಯೋ ಭಕ್ತ್ಯಾ ಗುರುರಾಘವೇಂದ್ರ ಚರಣದ್ವಂದ್ವಂಸ್ಮರನ್ ಯಃಪಠೇತ್।
ಸ್ತೋತ್ರಂ ದಿವ್ಯಮಿದಂ ಸದಾ ನ ಹಿ ಭವೇತ್ ತಸ್ಯಾಸುಖಂ ಕಿಂಚನ ।

ಕಿಂತ್ವಿಷ್ಟಾರ್ಥಸಮೃದ್ಧಿರೇವ ಕಮಲಾನಾಥಪ್ರಸಾದೋದಯಾತ್ ।
ಕೀರ್ತಿರ್ದಿಗ್ವಿದಿತಾ ವಿಭೂತಿರತುಲಾ ಸಾಕ್ಷೀ ಹಯಾಸ್ಯೋಽತ್ರ ಹಿ ॥೩೧॥

ಇತಿ ಶ್ರೀ ರಾಘವೇಂದ್ರಾರ್ಯಗುರುರಾಜ ಪ್ರಸಾದತಃ ।
ಕೃತಂ ಸ್ತೋತ್ರಮಿದಂ ಪುಣ್ಯಂ ಶ್ರೀಮದ್ಭಿರಪ್ಪಣಾಭಿಧೈಃ ॥ ೩೨ ॥

—o—

ಪೂಜ್ಯಾಯ ರಾಘವೇಂದ್ರಾಯ
ಸತ್ಯ ಧರ್ಮ ರತಾಯಚ
ಭಜತಾಂ ಕಲ್ಪವೃಕ್ಷಾಯ
ನಮತಾಂ ಕಾಮಧೇನವೇ ॥

—o—

॥ ಶ್ರೀ ॥

# ಶ್ರೀ ರಾಘವೇಂದ್ರಸ್ತವನ

(ಅಶ್ವ ಧಾಟೀ ಸಾಂಗತ್ಯ)

ಗುರು ರಾಘವೇಂದ್ರ ತವ । ಚರಣಾರವಿಂದದ ಭ್ರ । ಮರು ನೆನಿಸುವ ಮನುಜಗೇ ॥ ಪರಿಮಳವು ಷಟ್ಪದಕೆ । ವರಕಮಲ ಪತತಿಯಿಂ । ಭರದಿಂದ ದೊರೆವಂದದೀ ॥ ಸ್ಥಿರಭಕ್ತಿ ಜ್ಞಾನ ವಿ। ಸ್ಫುರಿಸುವದು ನಿತ್ಯ ಸುಖ । ಖಳೆಯುದೂ ಸಟೆಯಲ್ಲವೋ ॥ ಕರೆದು ಕಾಮಿತವೀವ । ಸುರಧೇನುವಿರಲನ್ಯ । ನರರ ತುತಿಸುವದ್ಯಾತಕೆ ॥ ೧ ॥ ಪ್ರಲ್ಹಾದನಾಗಿ ಶ್ರೀ । ನಲ್ಲನ ಭಕ್ತ ಜನ । •ರೆಲ್ಲಾರಿಗಿವ ತೋರಿದಾ ॥ ಉಲ್ಹಾಸದಲಿ ಮುನಿಗಳಲ್ಲುತ್ತಮನು ಹರಿಯು । ಎಲ್ಲರೊಳಗಧಿಕನೆಂದಾ ॥ ಸಲ್ಹಾದನಣ್ಣಯತಿ । ಮಲ್ಲನಿವನೀ ಜಗದೊ । ಳೆಲ್ಲಾ ದ್ವಿಜರ ಸಲಹಿದಾ ॥ ಒಳ್ಳೇಮನದಿ ಭಕ್ತರೆಲ್ಲಾರು ಇವರ ಸ್ತುತಿ । ಉಲ್ಹಾಸದಿಂ ಕೇಳ್ವುದೂ ॥ ೨ ॥ ಇಂದ್ರಾದ್ಯಮರರು ಈ । ವೃಂದಾ ವನದಲಿ ಗೋ । ವಿಂದನ್ನ ಕೂಡಿರುವರೂ ॥ ಪೊಂದಿಪ್ಪವಿಲ್ಲಿ ಮುನಿ । ವೃಂದಾದಿ ದಾಸಕುಲ । ವೀಂದ್ರ ಧ್ವಜನ ದೂತನ ॥ ಸುಂದರನು ಇಲ್ಲಿರಲು । ಚಂದ ವಿರುವೀ ಸ್ಥಾನ । ಕೇಂದ್ರವೆನಿಪುದು ಬುಧರಿಗೆ ॥ ಸಂದೇಹವಿಲ್ಲವೋ ಯು । ಶೀಂದ್ರನ ರೂಪದಿಂ । ದಿಂದ್ರಾವರಜ ನಿಂತಿಹ ॥ ೩ ॥ ಶ್ರೇಷ್ಠಾದ ಭಕ್ತಿಲು । ಜ್ಜ್ಯೇಷ್ಟದಲಿ ಬರಲು ಸಕ । ಲೇಷ್ಟ ಪ್ರದಾತನಡಿಗೆ ॥ ಕಾಷ್ಟಾಲಯ ಥಲಿಕಡು । ಶ್ರೇಷ್ಠಾನಲ್ಲಿಟ್ಟಂತೆ । ಕುಷ್ಟಾದಿಗಳ ಸುಡುವನು ॥ ಎಷ್ಟೇಳಲವನ

ಬಲು । ಸಾಷ್ಟಾಂಗ ವೆರೆಗೆ ಸಂ । ತುಷ್ಟಾಗಿ ತಾನೊಲಿವನೂ ॥ ಕಷ್ಟಂಗಳಂ
ಬಿಡಿಸಿ ಇಷ್ಟಾರ್ಥ ಕೊಟ್ಟು ಯತಿ । ಶ್ರೇಷ್ಠ ಪ್ರಭೂ ಪೊರೆವನು ॥ ೪ ॥
ಬಿನ್ನೈಪೆನೊ ಯತಿವ । ರೇಣ್ಯಪ್ರಭೋ ಎನಲು ಚಿನ್ನಾ । ನೀಬಾ ಎಂಬನೂ ।
ಕಣ್ಣೀಗೆ ಎವೆಯಂತೆ ॥ ಚನ್ನಾಗಿ ಪೋಷಿಸುವ । ನೆನ್ನಾಣೆ ಸುಳ್ಳಲ್ಲವೊ ॥
ಇನ್ನೇನು ಈ ಶ್ರೇಷ್ಠ । ಸನ್ಯಾಸಿ ಭಕ್ತರನು ಸನ್ಮಾನದಿಂ ಪೋಷಿಪಾ ॥
ಪುಣ್ಯಾಸೆ ಜನಕೇ ಸ್ವ । ಪುಣ್ಯಪ್ರದಾನದಿಂ ಚಿನ್ನಾಂಗನಿವ ತೋರುವ ॥ ೫ ॥
ರೋಗಾದ್ಯನೇಕ ವಿಧ । ಭೋಗೋಪಭೋಗದಲಿ ॥ ಸಾಗಿರ್ದು ಕಂಗೆಡದಲೇ ॥
ಯೋಗೇಶನಡಿಗಳನು । ರಾಗಾದಿ ಭಜಿಸೆಬಲುಬೇಗಾದಿಬಂದುಪೊರೇವಾ ॥
ಬಾಗೀದೊಡಿವಗೆ ಶಿರ । ವಾಗಾಗ್ಗೆ ಫಲಬಹುದು ಭಾಗೀರಥೀಸ್ನಾನದಾ ॥
ಯಾಗಾದಿಗಳ ಪುಣ್ಯ । ಭೋಗಂಗಳುಂಬುವರು । ನಾಗಾರಿಧ್ವಜನ ಪುಗದೀ
॥ ೬ ॥ ಮುದ್ದಾದರಾಯ ಪ್ರಸಿದ್ಧಾದ ವಾರಾಹಿ । ಶುದ್ಧವಿಹದಂಡೆ ಮೇಲೆ ॥
ಸಿದ್ಧಹಸ್ತದಿಂದ ಪರಿ । ಶುದ್ಧಾತ್ಮ ಕುಳಿತಿಹನು । ಸದ್ವೈಷ್ಣವಾಬ್ಧಿ ಚಂದ್ರ॥
ಉದ್ಧಾರ ಗೈವ ಭವ ಬದ್ಧರನು ಪೊರೆವ ಬಲು । ಶ್ರದ್ಧೆಯಿಂ ಭಜಿಸಿದೊಡನೆ ॥
ಮಧ್ವಾರ್ಯ ಮತದೀಕ್ಷೆ ಯದೃಚ್ಛಲಾಭ ವಿ । ತ್ತುದ್ದೇಶ ಪೂರೈಪನೋ ॥ ೭ ॥
ತುಂಗಾನಿವಾಸ ದಿ । ವ್ಯಾಂಗ ಪ್ರಭೂ ಜನರ । ಭಂಗಕ್ಕೆ ಗುರಿ ಮಾಡನೂ ॥
ಶೃಂಗಾರವದನ ನರ । ಸಿಂಗಾಂಗ ಶರಧಿ ಶಶಿ ॥ ಯಂಗೇನು ಭಜಿಸದಿಹುದೂ
ಗಂಗಾದಿಗಳ ಮಲ । ಹಿಂಗೊವುದೇ ಪಾಂಡು । ರಂಗನ್ನ ಪದಕಮಲಕೇ ।
ಭೃಂಗಾನೆನಿಪ ಬುಧೋತ್ತುಂಗನ್ನಭಾಗವತ । ಜಂಗೂಳಿಯಾ ನದುಸತೇ ॥ ೮ ॥
ಉತ್ಕೃಷ್ಟ ರಥದಿ ಮುನಿ । ಯೊತ್ತಾಯದಲಿ ಕುಳಿತು । ರತ್ನಾದಿ ಮಾಲೆ ಧರಿಸೀ॥
ಕಸ್ತೂರಿ ತಿಲಕ ಮೇಣ್ । ಕೆತ್ತಿರ್ದ ಪದಕ ವೊಳೆಯುತ್ತಿರ್ಪವೋ ಕಣ್ಣಿಗೆ ॥
ನಿತ್ಯದಾ ಸುಖ ಬಯಿಪರೊತ್ತಾಯದಲಿ ಬನ್ನಿ । ಮತ್ತೇನು ಬೇಕೆನುತಲೀ ॥
ಭಕ್ತಿಗೊಲಿದತಿಜನಂ । ಗತ್ಯಾದರಿಸುವದಕೆ । ಚಿತ್ತಗುಹೆವಾಸ ಪೇಳ್ವ ॥ ೯ ॥
ಸಿಕ್ಕಲ್ಲಿ ಐಹಿಕ ಸು । ಖಕ್ಕಾಗಿ ಪೋಗಿ ತ್ವರ । ಪೊಕ್ಕಾಲಯ ದಲಿನರರ ॥

ರೊಕ್ಕಕ್ಕೆ ಸೇವಿಸುತ | ದಿಕ್ಕಿಲ್ಲದವರಂತೆ | ಧಿಕ್ಕಾರವೋ ಜನ್ಮಕೇ || ಪಕ್ಕಂಗ ಳಂಕಳೆದ | ಪಕ್ಷಿಪ್ರತತಿಯಂತೆ | ಈ ಕ್ಷೋಣಿಯಲಿ ಬಾಳದೇ || ತಕ್ಕದಪೇಕ್ಷಿಸಿರಿ| ದಕ್ಕಾಗಿ ಇಲ್ಲಿಹನು | ಆಕ್ಷೇಪಣವು ಇಲ್ಲವೋ || ೧೦ || ವಾರಾಹಿವಾಸ ಭೂ | ಭಾರಾರಿ ದಿವ್ಯರಥ | ವೇರುತ್ತಲಾ ಕ್ಷಣದಲೀ ವಾರಾಂಗನೆರು ಬ್ರಹ್ಮ | ಚಾರ್ಯಾದ್ಯನೇಕ ಜನ | ಸಾರಾದಸಂಗೀತದೀ || ಬಾರೋ ನೀ ಭವರೋಗ | ದೂರಂಯತಿಯೇ ಎಂದು | ಸಾರುತ್ತ ಡಂಗುರಗಳ || ಕಾರುಣ್ಯನಿ ಯತಿಯು | ನಾರಾಯಣ ತೋರ್ಪ | ನಾರಾಧಿಪರ್ಗೆ ಬಿಡದೆ || ೧೧ || ನಾನಾ ಬಗೆಯ ಈ | ಕ್ಷೋಣಿಯ ಜೀವರಿಗೆ | ನಾನಾ ವಿಧದೆ ಕಾಣುವಾ || ಆನೆಗೊಲಿದನ ಪ್ರೀಯನು | ದಾನಗಳನಿತ್ತ ಸುಖ | ಜ್ಞಾನಾದಿ ಭಕ್ತಿ ಈವ || ನಾನಾರ್ಥ ವೀವಯತಿ | ಮಾನೋತ್ತಮರಿಗೆ ಈ | ಕ್ಷೋಣಿಯೊಳಾರಿರುವರೊ || ಗಾನಾ ವಿಮೋಹಕನು | ಮಾನಿಲ್ಲ ಪೊರೆವ ಪ್ರಮಾಣವೇ ಭೋಗವಿರಲು || ೧೨ || ಗುಂಪಾಗಿ ಭಾಗವತ | ರಿಂ ಪಾದ ಗಾಯನದಿ | ಮಾಂಪಾಹಿ ಗುರುವೆಂಬರೂ || ಕೆಂಪಾದ ಕಮಲಾಕ್ಷ | ಕಂಪಿಸುವೆವು ಭವದಿ | ನೀ ಪಾಲಿಸೆಂದೆನುತವ || ನೀಂ ಪಾಲಿಸದಿರೆ ಈ | ಗುಂಪುಗಳ ಗತಿಯೇನು | ನಾಂಪೇಳಲಾರೆನುತಲೀ || ಚಂಪಕಾ ನಾಶಿಕನೆ | ಪೆಂಪೊಡೆದ ಪದ ಜ್ಯೋತಿ | ತಂಪಾಗಿ ಪಸರಿಸಿಹದೂ || ೧೩ || ಶಾಂತತೆಯಲಿ ಚಂದ್ರ | ಸಂತೋಷದಲಿ ಕಡಲ | ಕಾಂತಿಯೊಳಗಿವ ಭಾಸ್ಕರ || ಅಂತೇನು ಇವನ ಕರು | ಣೆಂಥಾದು ಬಲು ಜ್ಞಾನ | ವೆಂತನೆನಿಪನೆ ಪೊಗಳನು || ಚಿಂತಿಸುವದೇಕೆ ಜನ | ಭ್ರಾಂತಿಯಲಿ ಬರಿದೆ ಶ್ರೀ | ಮಂತಿಗಲಿ ದನುಜತನಯಾ || ಪಂಥದಲಿ ಬಲಿತಾತ | ಸಂತೇಂದ್ರ ದಾನದಲಿ ಮಂತ್ರಾ ಲಯಾ ನಿವಾಸ || ೧೪ || ನೀಲಾಂಗಭಕ್ತ ಭವ | ಜಾಲಾವಿನಾಶ ಕುಲ | ಕೋಲಾಹಲವಿದುರನೋ || ಶೀಲೋತ್ತಮನು ತುಳಸಿ | ಮಾಲಾವಿಭೂಷಿತ ನು | ಶೀಲೇಂದ್ರವಂದ್ಯ ನಿವನು || ವ್ಯಾಲಾಲಯದಲಿಲಿಯು ಬಾಳಿರ್ಪ ತೆರ

ಮೋಹ । ಜಾಲವಾಗಿಹ ಭವದಲಿ ॥ ಕಾಲೆಂತು ಕಳೆವುದೆನೆ । ಬಾಲಾ ನೀ ಬಾ ಎಂಬ । ಪಾಲಾಬ್ಧಿ ಶಯನದಾಸ ॥ ೧೫ ॥ ನಿಗಮದ ಧ್ವನಿಗಳೀ । ಜಗದೇವತೆಗಳಿಲ್ಲ । ಸ್ಥಗಿತ ಭಕ್ತಿಲೀ ಗೈಯುತಾ ॥ ಮಿಗೆ ಧನ್ಯವಾದೇವಿ । ಜಗದೊಳಗೆನುತ ಗುರುಗ। ಳಘ ಕಳೆವ ಚರಣ ಕಂಡು ॥ ಪೊಗಳಲಳವೇ ಜಗ । ದ್ಗುರುವಿರಲು ದೈವಕೀ । ಮಿಗಿಲಾದ ಕನ್ನಡಿಗರಾ ॥ ಮಗುವೆಂದು ಪೊರೆದನುಜ । ಮಗನೆಂದು ದಾಸಕುಲ । ಕರ ಮುಗಿತು ಕನ್ನಡಿಗಗೆ ॥ ೧೬ ॥ ಶ್ರೀಶನಂಘ್ರಿಯ ದೂತ । ಪೋಷಿಸೆಲೊ ಭಕ್ತರನು ಘಾಸೆಗೊಳಿಸಿದ ಲೆಂದಿಗೂ ॥ ನೀ ಸಲಹ ದಿರಲು ಈ । ಭೂಸುರೆನಿಪರು ನರರ । ದಾಸರಾಗುವರು ಬಿಡದೇ ॥ ಘಾಸೆ ಗೊಂಡರು ಬಲು ದು । ರಾಶ ಹೆಚ್ಚಿತು ದ್ವಿಜರು ದಾಸಿಸಲ್ಪಡುವರಿಹದೀ ॥ ಈಶೊ ಕಾಯಿೀಯಂತೆ । ಭೂಸುರರ ಬಿಡದೆ ನೀ ಪೋಷಿಸೆನ್ನರೆನುತಲಿ ॥ ೧೭ ॥ ವ್ಯಾಕರಣ ಗಣಯತಿಗ । ಳಾಕರಿಣ ಮಾತ್ರೆಗಳ । ಸ್ವೀಕರಿಸಕೂಡದೆಂದೂ ॥ ಲೇಖಕನು ಬಿನ್ನೈಪ । ಪ್ರಾಕೃತವಿದೆಂದು ಜನ । ಭೀಕರದ ಟೀಕೆ ಬಿಟ್ಟು ॥ ವ್ಯಾಕುಲದ ಭವರೋಗ । ಕೇಕಔಷಧ ಮಾತ್ರೆ । ಪಾಕವಿದು ಜನರು ಬಿಡದೇ ॥ ಏಕಚಿತ್ತದಿ ಪಠಿಪು । ದೀ ಕೃತಿಯ ನಿತ್ಯದೈ । ಹಿಕದ ಸುಖಕೊಳಗಾಗದೇ ॥ ೧೮ ॥ ಕಂಡಲ್ಲಿ ಬೇಡಿ ಬಲು । ಬೆಂಡಾದೆ ಗುರುವೆನಲು । ಚಂಡಾಲ ನಿರೆ ಸಲಹುವಾ ॥ ದಂಡ ಪ್ರಣಾಮ-ದಿಂ । ಕೊಂಡಾಡವರ ಶಿರ । ಚಂಡಾಗುವದು ಯಮನಿಗೆ ॥ ಕೊಂಡಾಡು ದುರಿತವನ । ಕೆಂಡಾದ ಯತಿಯ ಇ । ತ್ತಂಡಾಗುವದು ಸಂಪದಾ ॥ ಕೊಂಡಾಡುವರ ಪೊರೆವ । ಖಂಡಾದಿ ವಂದ್ಯ ಖಳ । ಹಿಂಡಾರಿ ಪಾಂಡುವಿಠಲಾ ॥ ೧೯ ॥

॥ ಶ್ರೀ ಗುರುರಾಜೋ ವಿಜಯತೇ ॥



# ಶ್ರೀ ಗುರುಸಾರ್ವಭೌಮರ ಮೇಲಿನ ಕೀರ್ತನೆಗಳು.

## ೧. ರಾಗ—ನಾಟಿ—ಅಟತಾಳ

ಸತ್ಯಂ ಜಗತಿದು ಪಂಚಭೇದವು ನಿತ್ಯ ಶ್ರೀ ಗೋವಿಂದನಾ। ಕೃತ್ಯ ವರಿತು ತಾರತಮ್ಯದಿ ಕೃಷ್ಣನಧಿಕನೆಂದು ಸಾರಿರೈ ॥ ಪ ॥ ಜೀವ ಈಶಗೆ ಭೇದ ಸರ್ವತ್ರ ಜೀವ ಜಡಪರಮಾತ್ಮಗೆ ॥ ೧ ॥ ಮಾನುಷೋತ್ತಮರಧಿಕ ಕ್ಷಿತಿಪರು ಮನುಷ್ಯದೇವ ಗಂಧರ್ವರೂ। ಜ್ಞಾನಿ ಪಿತ್ರಾಜ್ಞಾನ ಕರ್ಮಜ ದಾನವಾರಿ ತತ್ವಾತ್ಮರೂ ॥ ೨ ॥ ಗಣಪಮಿತ್ರನು ಸಪ್ತಋಷಿಗಳು। ವಹ್ನಿ ನಾರದ ವರುಣನು । ಇನಜಗೆ ಸಮ ಚಂದ್ರಸೂರ್ಯ ಮನುಸುತೆಯು ಹೆಚ್ಚು ಪ್ರವಹನು ॥ ೩ ॥ ದಕ್ಷಸಮ ಅನಿರುದ್ಧ ಶಚಿ ಗುರು ರತಿ ಸ್ವಯಂಭುವರೀರ್ವ-ರು ॥ ಪ್ರಾಣಗಿಂತ ಅಧಿಕ ಕಾಮನು ಕಿಂಚಿದಧಿಕನು ಇಂದ್ರನು ॥ ೪ ॥ ದೇವ ಇಂದ್ರನಿಗಧಿಕ ಮಹರುದ್ರ । ದೇವ ಸಮ ಶೇಷಗರುಡರು । ಕೇವಲವು ರುದ್ರಾದಿಗಳಿಗೆ ದೇವಿ ಹೆಚ್ಚು ಸರಸ್ವತಿ ॥ ೫ ॥ ವಾಯುವಿಗೆ ಸಮರಿಲ್ಲ ಜಗದೊಳು । ವಾಯುದೇವರೇ ಬ್ರಹ್ಮರು । ವಾಯು ಮುಕ್ತಾಮುಕ್ತ ಕೋಟಿಗೆ ಅಧಿಕ ಶಕ್ತಳು ಶ್ರೀರಮಾ ॥ ೬ ॥ ಅನಂತಗುಣಗಳಿಂದ ಲಕುಮಿಗೆ । ಅಧಿಕ ಪುರುಂದರವಿಠಲನೂ ॥ ಘನರು ಸಮರಿವಗಿಲ್ಲ ಜಗದೊಳು ಹನುಮ ಹೃತ್ಪದ್ಮವಾಸಿಗೆ ॥ ೭ ॥ ॥ ಶ್ರೀಃ ॥

## ೨. ರಾಗ—ಭೈರವಿ—ತ್ರಿಪುಟತಾಳ

[ ಮಂತ್ರಾಲಯ ರಾಯರಿಂದ ವಿರಚಿತ ]

ಇಂದು ಎನಗೆ ಗೋವಿಂದ। ನಿನ್ನ ಪಾದಾರ ವಿಂದವ ತೋರೋ ಮುಕುಂದ ॥ ಪ ॥ ಸುಂದರ ವದನನೆ ನಂದಗೋಪನ ಕಂದ । ಮಂದರೋದ್ಧರ ಆ । ನಂದ ಇಂದಿರೆರಮಣ ॥ ಅನು ॥ ನೊಂದೆನಯ್ಯಾ ಭವಬಂಧನದೊಳು ಸಿಲುಕಿ। ಮುಂದೆ ದಾರಿಕಾಣದೆ ಕುಂದಿದೆ ಜಗದೊಳು ॥ ಕಂದನು ಎಂದೆನ್ನ ಕುಂದುಗಳೆಣಿಸದೆ। ತಂದೆ ಕಾಯೋ ಕೃಷ್ಣ । ಕಂದರ್ಪಜನಕನೆ

॥ ೧ ॥ ಮೂಢತನದಿ ಬಹು ಹೇಡಿ ಜೀವನನಾಗಿ । ದೃಢಭಕುತಿಯನು ಮಾಡಲಿಲ್ಲವೋ ಹರಿಯೇ ॥ ನೋಡಲಿಲ್ಲವೋ ನಿನ್ನ । ಪಾಡಲಿಲ್ಲವೊ ಮಹಿಮೆ ಗಾಡಿಗಾರ ಕೃಷ್ಣ । ಬೇಡಿಕೊಂಬೆನೋ ನಿನ್ನ ॥ ೨ ॥ ಧಾರುಣಿಯೊಳು ಭೂ ಭಾರ ಜೀವನನಾಗಿ । ದಾರಿತಪ್ಪಿ ನಡೆದೆ ಸೇರಿದೆ ಕುಜನರ ॥ ಆರೂ ಕಾಯು ವರಿಲ್ಲ । ಸೇರಿದೆ ನಿನಗಯ್ಯಾ । ಧೀರ ವೇಣುಗೋಪಾಲ । ಪಾರುಗಾಣಿಸೊ ಹರಿಯೇ ॥ ೩ ॥ ॥ ಶ್ರೀಃ ॥

## ೩. ರಾಗ—ಧನ್ಯಾಸಿ—ಅಟತಾಳ

ಗುರು ರಾಘವೇಂದ್ರರ । ಚರಣಕಮಲವನ್ನು । ಸ್ಮರಿಸುವ ಮನುಜ ರಿಗೆ ॥ ಪ ॥ ಕರೆಕರೆಗೊಳಿಸುವ । ದುರಿತ ದುಷ್ಕೃತವೆಲ್ಲ । ಕರಿಯು ಸಿಂಹನ ಕಂಡ । ತೆರನಾಗುವುದಯ್ಯಾ ॥ ಅ ॥ ಗುರುಮಧ್ವಮತವೆಂಬ । ವರ ಕ್ಷೀರಾಬ್ಧಿಯಲ್ಲಿ ಹರಿ ಧರಿಸಿದ ಶಶಿಯಂತುದಿಸಿ ॥ ಪರಮತ ತಿಮಿರಕ್ಕೆ । ತರಣಿ ಕಿರಣವೆನ್ನಿಸಿ । ಧುರದಿ ಮೆರೆದ ನರ । ಹರಿ ರಾಮಾರ್ಚಕರಾದ ॥ ೧ ॥ ಹರಿಯೆ ಸರ್ವೋತ್ತಮ – ಸಿರಿಯು ಆತನ ರಾಣಿ । ಪರಮೇಷ್ಟಿ ಮರುತರೆ ಗುರುಗಳೆಂದೂ ॥ ಗರುಡ ಶೇಷ ರುದ್ರ ಸಮರೆಂದು ಸ್ಥಾಪಿಸಿ । ತರತಮ ಪಂಚಭೇದವೆ ಸತ್ಯವೆಂಬ ॥ ೨ ॥ ಅಂಧಕರಿಗೆ ಚಕ್ಷು । ವಂಧ್ಯೆಯರಿಗೆ ಸುತರು । ಬಂದಬಂದವರಿಗಭೀಷ್ಟವ ಕೊಡುತ ॥ ಒಂದಾರುನೂರು ವತ್ಸರ ಬೃಂದಾವನದಲ್ಲಿ । ಚಂದಾಗಿ ನಿಂದೂ ಮೆರೆವ ಕೃಪಾಸಿಂಧೂ ॥ ೩ ॥ 'ರಾ' ಎನ್ನೆ ರಾಶಿ ದೋಷಗಳ ದಹಿಸುವ । 'ಘ' ಎನ್ನೆ ಘನ ಜ್ಞಾನ ಭಕುತಿ ಈವ॥ "ವೇಂ" ಎನ್ನೆ ವೇಗದಿ ಜನನ ಮರಣ ದೂರ । "ದ್ರ" ಎನ್ನೆ ದ್ರವಿಣಾರ್ಥ । ಶ್ರುತಿಪಾದ್ಯನ ಕಾಂಬ ॥ ೪ ॥ ವರ ತುಂಗಾ ತೀರ ಮಂ । ತ್ರಾಲಯ ಪುರದಲ್ಲಿ ಪರಿಪರಿ ಸೇವೆ ಭೂಸುರರಿಂದ ಕೊಳುತಾ ॥ ಸಿರಿರಮಣಾ ನಮ್ಮ ಗೋಪಾಲ ವಿಠಲನ್ನ । ಚರಣ ಭಜಿಸುತಿಪ್ಪ ವರಶಿಖಾಮಣಿಯಾದ ॥ ೫ ॥ ॥ ಶ್ರೀಃ ॥

ಪಾಠಾಂತರ—ದೇವಾಂಶರಾಗಿ ತುಂಗಾತಟನದಿ ನಿಂತು ।
ಸೇವೆ ಭೂಸುರರಿಂದ ಬಹು ಕೊಳ್ಳುತ ।

ಭಾವಜನಯ್ಯ ಶ್ರೀ ಗೋಪಾಲ ವಿಠ್ಠಲನ್ನ ।
ಸೇವಿಸುತಿಹ ಯತಿಕುಲ ಶಿಖಾಮಣಿಯಾದ ॥ ೩ ॥

ೞ. ರಾಗ—ಮೋಹನ—ಝಂಪೆತಾಳ

ನೋಡಿಲೇ ಮನವೇ ಕೊಂಡಾಡು ಗುರುಗಳ ಪಾದ । ಈಡಿಲ್ಲವೋ ಪುಣ್ಯಕೆ ॥ಪಲ್ಲ॥ ನಾಡೊಳಗೆ ಗುರು ರಾಘವೇಂದ್ರರಾಯರ ಸೇವೆ ಮಾಡಿದವ ಪರಮ ಧನ್ಯ, ಮಾನ್ಯ ॥ಅನುಪಲ್ಲ॥ ನಿಷ್ಠೆಯಿಂದಲಿ ಸ್ಮರಿಸೆ ಕಷ್ಟಗಳು ದೂರ ಮನೋಭೀಷ್ಟಗಳ ಪೂರೈಪರೋ । ಅಷ್ಟ ಸೌಭಾಗ್ಯವನೆ ಕೊಟ್ಟು ಸುಜನರಿಗೆ ಶ್ರೀ ವಿಷ್ಣುದಾಸ್ಯವ ತೋರ್ಪರೋ ॥ ದೃಷ್ಟಿಯಿಂದಲಿ ನೋಡಲನೇಕಜನ್ಮದ ಪಾಪ ಬಿಟ್ಟು ಪೋಪವೋ ಕ್ಷಣದಲ್ಲಿ । ಎಷ್ಟು ಹೇಳಲಿ ಇದರ ನಿಷ್ಠೆ ಮಹಾತ್ಮೆಯನು ದುಷ್ಟರಿಗೆ ದೊರೆಯದಿವರಾ ಸೇವೆ ॥ ೧ ॥ ಹಲವು ಕ್ಷೇತ್ರಗಳ್ಯಾಕೆ ಹಲವು ತೀರ್ಥಗಳ್ಯಾಕೆ ಫಲ ಸುಲಭದಲ್ಲಿರಲು । ಬಲವು ಇದ್ದದರೊಳು ಪ್ರದಕ್ಷಿಣೆ ಸುಪದಜಲ ತಲೆಯಲ್ಲಿ ಧರಿಸಿ ನಿತ್ಯ ॥ ಮಲರಹಿತನು ಆಗಿ ದಂಡಪ್ರಣಾಮ ಮಾಡೆ ಒಲಿವರು ಕರುಣದಲ್ಲಿ ಬೇಗ ॥ ಜಲಜನಾಭನು ನಾಲ್ಕು ರೂಪದಿಂದ ವರಲ್ಲಿ । ಸಿಲುಕಿ ಪೂಜೆಯ ಕೊಂಬ ಸತತ ಮೋಕ್ಷದಾತಾ ॥ ೨ ॥ ಹರಿದಾಸರಿದ್ದ ಸ್ಥಳ ವರಕಾಶಿ ಮೊದಲಾದ ಕುರುಕ್ಷೇತ್ರಕಿಂತಧಿಕವೋ । ಸುರಋಷಿ ಮುನಿಗಳು ಇಲ್ಲಿಹರು ವೈಕುಂಠ ಸರಿ ಮಿಗಿಲು ಎಂದೆನಿಪುದೋ ॥ ಪರಮ ಸುಜ್ಞಾನಿಗಳಿಗೀ ಫಲವು ದೊರಕುವುದು ತರತಮದಿ ಇತರ ಜನಕೆ । ಗುರು ಶ್ರೀಶ ವಿಠಲನು ಇವರ ರೂಪ ನಾಮದಲಿ। ಪರಿಪರಿಯ ವರವ ಗರೆವಾ ಪೊರೆವಾ ॥ ॥ ೩ ॥ ॥ ಶ್ರೀಃ ॥

೫. ರಾಗ—ಮಧ್ಯಮಾವತಿ—ಆದಿತಾಳ

ರಥವಾನೇರಿದ ರಾಘವೇಂದ್ರ । ರಾಯ ಗುಣಸಾಂದ್ರ ॥ಪಲ್ಲ॥ ಸತತ ಮಾರ್ಗದಲಿ ಸಂಸೇವಿಪರಿಗೆ ಅತಿ । ಹಿತದಿಂದಲಿ ಮನೋರಥವ ಕೊಡುವೆನೆಂದು ॥ಅನುಪಲ್ಲ॥ ಚತುರದಿಕ್ಕು ವಿದಿಕ್ಕುಗಳಲ್ಲಿ । ಚರಿಪ ಜನರಲ್ಲಿ । ಮಿತಿ

ಯಿಲ್ಲದೆ- ಬಂದೋಲೈಸುತಲಿ । ವರವ । ಬೇಡುತಲಿ । ನುತಿಸುತ ಪರಿಪರಿ ನತರಾಗಿಹರೆಗೆ ಗತಿ ಪೇಳದಲೆ ಸರ್ವಥಾ ನಾ ಬಿಡೆನೆಂದು ॥ ೧ ॥ ಅತುಳ ಮಹಿಮನಾ ದಿನದಲಿ । ದಿತಿಜವಂಶದಲಿ । ಉತುಪತ್ತಿಯಾಗಿ ಉಚಿತದಲ್ಲಿ । ಉತ್ತಮ ಮತಿಯಲ್ಲಿ ॥ ಅತಿಶಯುವಿರುತಿರೆ ಪಿತನ ಬಾಧೆಗಳು ಮ । ನ್ಮಥ ಪಿತನೊಲಿಸಿದ । ಜಿತ ಕರುಣದಲಿ ॥ ೨ ॥ ಪ್ರಥಮ ಪ್ರಹ್ಲಾದ ವ್ಯಾಸಮುನಿಯೆ । ಯತಿ ರಾಘವೇಂದ್ರ । ಪತಿತರುದ್ಧರಿಪ । ಪಾವನಕರಿಯೆ । ಕೈ ಮುಗಿಯು ವೆನು ಧೊರೆಯೆ ॥ ಕ್ಷಿತಿಯೊಳು ಗೋಪಾಲ ವಿಠಲ ನಡೆಯುತ ವರ ಮಂತ್ರಾ ಲಯದೊಳು ಶುಭವ ಕೊಡುವೆನೆಂದು ॥ ೩ ॥ ॥ ಶ್ರೀಃ ॥

### ೬. ರಾಗ—ಜಂಜೂಟಿ—ಆದಿತಾಳ

ರಾಘವೇಂದ್ರಗುರು ರಾಯರ ಸೇವಿಸಿರೋ । ಸೌಖ್ಯದಿ ಜೀವಿಸಿರೋ ॥ ಪಲ್ಲ ॥ ತುಂಗಾತೀರದಿ ರಘುರಾಮನ ಪೂಜಿಪರೋ । ನರಸಿಂಗನ ಭಜ ಕರೋ ॥ ಅನು ॥ ಶ್ರೀ ಸುಧೀಂದ್ರ ಕರಸರೋಜ ಸಂಜಾತ । ಜಗದೊಳಗೆ ಪುನೀತ । ದಾಶರಥಿಯ ದಾಸತ್ವವ ತಾನ್ವಹಿಸಿ । ದುರ್ಮತಗಳ ಜಯಿಸಿ ॥ ಈ ಸಮೀರಮತ ಸಂಸ್ಥಾಪಕರಾಗಿ । ನಿಂದಕರನು ನೀಗಿ ॥ ಭೂಸುರರಿಗೆ ಸಂಸೇವ್ಯ ಸದಾಚರಣೀ । ಕಂಗೊಳಿಸುವ ಕರುಣೀ ॥ ೧ ॥ ಕುಂದದ ವರ ಮಂತ್ರಾಲಯದಲ್ಲಿರುವ । ಕರೆದಲ್ಲಿಗೆ ಬರುವ । ಬೃಂದಾವನಗತ ಮೃತ್ತಿಕೆ ಜಲಪಾನ । ಮುಕ್ತಿಗೆ ಸೋಪಾನ ॥ ಸಂದರ್ಶನ ಮಾತ್ರದಲಿ ಮಹತ್ಪಾಪ । ಬಡಿದೋಡಿಸಲಾಪ । ಮಂದಭಾಗ್ಯರಿಗೆ ದೊರಕದಿವರ ಸೇವಾ । ಶರಣರ ಸಂಜೀವಾ ॥ ೨ ॥ ಶ್ರೀದವಿಠ್ಠಲನ ಸನ್ನಿಧಾನಪಾತ್ರ । ಸಂಸ್ತುತಿಸುವ ಮಾತ್ರ ಮೋದಪಡಿಸುತಿಹ ತಾನಿಹಪರದಲ್ಲಿ । ಈತಗೆ ಸರಿಯೆಲ್ಲಿ ॥ ಮೇದಿನಿಯೊಳ ಗಿನ್ನರಿಸಲು ನಾಕಾಣೆ । ಪುಸಿಯಲ್ಲೆನ್ನಾಣೆ । ಪಾದಸ್ಮರಣೆಯ ಮಾಡದವನೆ ಪಾಪಿ ನಾ ಹೇಳುವೆ ಸ್ಥಾಪಿ ॥ ೩ ॥ ॥ ಶ್ರೀಃ ॥

### ೭. ರಾಗ—ನಾಲಿ—ತ್ರಿಪುಟತಾಳ

ರಾಘವೇಂದ್ರ ಯತಿಸಾರ್ವಭೌಮ ದುರಿತೌಘದೂರ ತೇ ನಮೋ ನಮೋ ॥ ಮಾಗಧರಿಪು ಮತಸಾಗರಮೀನ ಮಹಾಘವಿನಾಶನ ನಮೋ.

ನಮೋ ॥ ಶ್ಲಾಘಿತ ಗುಣಗಣ ಸೂರಿಪ್ರಸನ್ನ ಸ ॥ ದಾಗಮಜ್ಞ ತೇ ನಮೋ ನಮೋ ॥ ಮೇಘಶ್ಯಾಮಲ ವರ್ಣನ ನಾಮಾ ॥ ಮೋಘಬೋಧ ತೇ ನಮೋ ನಮೋ ॥ ೧ ॥ ತುಂಗಭದ್ರಸುತರಂಗಿಣಿ ತೀರಗ ॥ ಮಂಗಳಚರಿತ ಶುಭಾಂಗ ನಮೋ ॥ ಗಾಂಗೇಯ ಸಮಭಂಗ ಕುಮುದ ಮಾ । ತಂಗಸಂಗ ಸಿತಾಪಾಂಗ ನಮೋ ॥ ಇಂಗಿತಜ್ಞ ಕಾಳಿಂಗ ಮಥನ ಯದುಪುಂಗವ ಹೃದಯ ಸುಸಂಗ ನಮೋ ॥ ಸುರಗಿರಚಿನ್ಹಿತ ಶೃಂಗಾರಾನನ ತಿಂಗಳ ಕರುಣಾಂಗ ನಮೋ ಕೋವಿದಮಸ್ತಕ ಶೋಭಿತಮಣಿಸಂ. । ಭಾವಿತ ಮಹಿಮಾಪಾಲಯ ಮಾಂ॥ ಸೇವಾಪರ ಸರ್ವಾರ್ಥಪ್ರದ ವರಬೃಂ ॥ ದಾವನ ಮಂದಿರ ಪಾಲಯ ಮಾಂ ॥ ಭಾವಜಮಾರ್ಗಣಭುಜಗ ವಿನಾಯಕ ॥ ಭಾವಜ್ಞಪ್ರಿಯ ಪಾಲಯ ಮಾಂ ॥ ಕೇವಲ ನತಜನ ಪಾವನರೂಪ ಸದಾ ॥ ವಿನೋದಿ ಹೇ ಪಾಲಯ ಮಾಂ ॥೨॥ ಶ್ರೀ ಸುಧೀಂದ್ರ ಕರಜಾತ ನಮೋ ನಮೋ ॥ ಶ್ರೀ ಭೂಸುರನುತ ವಿಖ್ಯಾತ ನಮೋ ॥೩॥ ದೈಶಿಕವರ ಸಂಸೇವ್ಯ ನಮೋ ನಮೋ । ದೋಷವಿವರ್ಜಿತ ಕಾವ್ಯ ನಮೋ । ಕ್ಲೇಶಿತಜನ ಪರಿಪಾಲ ನಮೋ ನಮೋ । ಭಾಸಿತಕರುಣಾಶೀಲ ನಮೋ ॥ ವ್ಯಾಸರಾಮಪದಭಕ್ತ ನಮೋ ನಮೋ ॥ ಶಾಶ್ವತ ಧರ್ಮಾಸಕ್ತ ನಮೋ ॥೪॥ ಸನ್ನುತಮಹಿಮ ಜಗನ್ನಾಥವಿಠಲ ಸನ್ನಿಹಿತ ಮಾನ್ವಿತ ಜಯ ಜಯ ಭೋ ॥ ಚಿನ್ಹಿತದಂಡಕಮಂಡಲುಪುಂಡ್ರ ಪ್ರಸನ್ನ ಭಯಾಪಹ ಜಯ ಜಯ ಭೋ ॥ ಮಾನ್ಯಮಹಾತ್ಮ ಪ್ರಸನ್ನ ವರದಾ ಕಾರುಣ್ಯಪಯೋನಿಧಿ ಜಯ ಜಯ ಭೋ ॥ ಧನ್ಯ ಕ್ಷಮಾಸಂಪನ್ನ ಧರಾಮರ ॥ ಶರಣ್ಯ ಸದಾ ರ್ಚಿತ ಜಯ ಜಯ ಭೋ ॥ ೫ ॥ ॥ ಶ್ರೀಃ ॥

## ೮. ರಾಗ—ಆನಂದಭೈರವಿ – ಆದಿತಾಳ

ರಾಯ ಬಾರೋ । ತಂದೆ । ತಾಯಿ ಬಾರೋ ॥ ನಮ್ಮನು ಕಾಯಿ ಬಾರೋ॥ ಮಾಯಿಗಳ ಮರ್ದಿಸಿದ ರಾಘವೇಂದ್ರಾ ॥ ರಾಯ ಬಾರೋ ॥ಪ॥ ವಂದಿಪ ಜನರಿಗೆ ಮಂದಾರ ತರುವಂತೆ ॥ ಕುಂದದಭೀಷ್ಟವ ಸಲಿಸುತಿರ್ಪೆ । ರಾಯ ಬಾರೋ ॥ ಕುಂದದಭೀಷ್ಟವ ಸಲಿಸುತಿರ್ಪೆ ಸರ್ವಜ್ಞ । ಮಂದನ ಮತಿಗೆ ರಾಘವೇಂದ್ರಾ ॥ ರಾಯಬಾರೋ ॥ ೧ ॥ ಆರ್ಮೂರು ಏಳು ನಾಲ್ಕು

ಎಂಟು ಗ್ರಂಥಸಾರಾರ್ಥ | ತೋರಿದಿ ಸರ್ವರಿಗೆ ನ್ಯಾಯದಿಂದ || ರಾಯ ಬಾರೋ ತೋರಿದಿ ಸರ್ವರಿಗೆ ನ್ಯಾಯದಿಂದ ಸರ್ವಜ್ಞ || ಸೂರಿಗಳರಸನೆ ರಾಘವೇಂದ್ರ ರಾಯ ಬಾರೋ || ೨ || ರಾವ ಪದಾಬ್ಜ ಸತತ ಭೃಂಗ ಕೃಪಾಂಗ || ಭ್ರಾಮಕ ಜನರ ಮಾನಭಂಗಾ || ರಾಯ ಬಾರೋ | ಭ್ರಾಮಕ ಜನರ ಮಾನಭಂಗ ಮಾಡಿದ || ಧೀಮಂತರೊಡೆಯನೆ ರಾಘವೇಂದ್ರಾ || ರಾಯಬಾರೋ || ೩ || ಭಾಸುರಚರಿತನೆ ಭೂಸುರವಂದ್ಯನೆ ಶ್ರೀಸುಧೀಂ | ದ್ರಾರ್ಯವರಪುತ್ರ || ರಾಯ ಬಾರೋ || ಶ್ರೀಸುಧೀಂದ್ರಾರ್ಯರ ವರಪುತ್ರ ನೆನಿಸಿದೆ || ದೈಶಿಕರೊಡೆಯ ರಾಘವೇಂದ್ರಾ || ರಾಯ ಬಾರೋ || ೪ || ಭೂತಳನಾಥನ ಭೀತಿಯು ಬಿಡಿಸಿದೆ ಪ್ರೇತತ್ವ ಕಳೆದ ಮಹಿಷೀಯಾ || ರಾಯ ಬಾರೋ || ಪ್ರೇತತ್ವ ಕಳೆದ ಮಹಿಷೀಯ ಮಹಾಮಹಿಮ ಜಗನ್ನಾಥ ವಿಠಲ ಪ್ರೀತಿಪಾತ್ರ || ರಾಯಬಾರೋ || ೫ || || ಶ್ರೀಃ ||

೯. ರಾಗ—ಪೀಲು—ಆದಿತಾಳ

ಎದ್ದು ಬರುತಾರೆ ನೋಡೆ | ತಾ- | ವೆದ್ದು ಬರುತಾರೆ ನೋಡೆ || ಪಲ್ಲ || ಮುದ್ದು ವೃಂದಾವನ | ಮಧ್ಯದೊಳಗಿಂಡ ತಿದ್ದಿ ಹಚ್ಚಿದ ನಾಮ | ಮುದ್ರೆ ಮುಂದೊಪ್ಪುತಲಿ || ಅನುಪಲ್ಲ || ಗಳದೊಳು ಶ್ರೀತುಳಸಿ ನಳಿನಾಕ್ಷ ಮಾಲೆಗಳು | ಚಲುವ ಮುಖದೊಳು ಪೊಳೆವ ದಂತಗಳಿಂದ || ೧ || ಹೃದಯ ಸದನದಲ್ಲಿ ಪದುಮನಾಭನ ಭಜಿಸಿ | ಮುದಮನದಿಂದ ನಿತ್ಯ | ಸದಮಲ ರೂಪ ತಾಳಿ || ೨ || ದಾತ ಗುರು ಜಗನ್ನಾಥ ವಿಠಲನ್ನ | ಪ್ರೀತಿಯ ಪಡಿಸುತ ದೂತನ ಪೊರೆಯುತ || ೩ || || ಶ್ರೀಃ ||

—೦—

ಶ್ರೀ

# ಶ್ರೀ ರಾಘವೇಂದ್ರ ಗುರುಭಜನವು

ಪಾಹಿ ಪಾಹಿ ರಾಘವೇಂದ್ರ ಗುರೋ
ತ್ರಾಹಿ ತ್ರಾಹಿ ಗುಣಸಾಂದ್ರ ಗುರೋ
ಕನಕ ಕಶ್ಯಪು ತನಯಾಂಶ ಗುರೋ
ಜನಕಜಾಪತಿ ಪದಭಕ್ತ ಗುರೋ
ಮಧ್ವಮತಾಂಬುಧಿ ಸೋಮ ಗುರೋ
ಸದ್ವೈಷ್ಣವ ಪರಿಪಾಲ ಗುರೋ
ವ್ಯಾಸರಾಜ ಮೌನೀಂದ್ರ ಗುರೋ
ವಾಸುಕಿ ಶಯನ ನೊಲಿಸಿದ ಗುರೋ
ಸುಧೀಂದ್ರ ಸುಕುಮಾರಾಖ್ಯ ಗುರೋ
ಬುಧಾವಳೀ ಸಂಸೇವ್ಯ ಗುರೋ
ವರಮಂತ್ರಾಲಯಪುರದಿ ಗುರೋ
ಸುರುಚಿರ ಮಂದಿರ ಗೈದ ಗುರೋ
ತುಂಗಭದ್ರ ತಟವಾಸ ಗುರೋ
ಸಂಗೀತಪ್ರಿಯನಾದ ಗುರೋ
ಕಾವಿವಸ್ತ್ರ ಕರದಂಡ ಗುರೋ
ಭಾವ ಶುದ್ಧದಿ ಧರಿಸಿರ್ಪ ಗುರೋ
ತಪ್ತಮುದ್ರಧರ ದೇಹ ಗುರೋ
ಕ್ಲುಪ್ತಮೀರಿ ವರವೀವ ಗುರೋ
ಕರ್ಪೂರಜದೇವತೆಯಾದ ಗುರೋ
ಕರ್ಪೂರದಿಗಳರಸೆನಿಸ ಗುರೋ

ಮೂಕನ ವಾಗ್ಮಿಯ ಗೈದ ಗುರೋ
ಮಾಕಳತ್ರನ ನಿಜದಾಸ ಗುರೋ
ಕುಷ್ಟರೋಗ ಪರಿಹಾರಿ ಗುರೋ
ಶಿಷ್ಟಜನರ ಉದ್ಧಾರಿ ಗುರೋ
ಅಂಧಗೆ ಕಂಗಳ ನೀವ ಗುರೋ
ಮಂದಮತಿಗೆ ಜ್ಞಾನವೀವ ಗುರೋ
ಭೂತಪ್ರೇತ ಭಯನಾಶ ಗುರೋ
ತಾತರುಣಿಯ ಸಾಕ್ಷಿಸಕೆ ಗುರೋ
ಸರ್ವರೋಗಪರಿಹಾರ ಗುರೋ
ಉರ್ವೀ ಸುರರಭಿಮಾನಿ ಗುರೋ
ಮಾಯಿಮತ ವನ ಕುಠಾರ ಗುರೋ
ವಾಯುಸುತಮತ ವಿಹಾರ ಗುರೋ
ಸರ್ವೇಶಪದಾಕ್ರಾಂತ ಗುರೋ
ಸರ್ವಾರಿಷ್ಟಕೃತಾಂತ ಗುರೋ
ಶೋಧಿಸಿ ಸಚ್ಛಾಸ್ತ್ರಾರ್ಥ ಗುರೋ
ಮೋದದಿ ಸುಲಲಿತ ಗೈದ ಗುರೋ
ಮಧುವೈರಿಯ ನಿಜದಾಸ ಗುರೋ
ಸುಧೆಗೆಪರಿಮಳವನಿತ್ತ ಗುರೋ
ಕುಮತಿಗಳನು ನೀ ಪೊರೆದೆ ಗುರೋ
ಸುಮತಿಗಳಿಗೆ ಬೋಧಿಸಿದೆ ಗುರೋ
ಹರಿನಿಂದಕರನು ಸದೆದೆ ಗುರೋ
ಹರಿ ಭಕುತರ ನೀ ಪೊರೆದೆ ಗುರೋ
ಬೃಂದಾವನದೊಳು ನಿಂದ ಗುರೋ

ಚಂದ್ರಿಕಾರ್ಯ ರಾಘವೇಂದ್ರ ಗುರೋ

ಪಾಪಕದಲಿ ಮಾತಂಗ ಗುರೋ

ಶಾಪಾನುಗ್ರಹ ಶಕ್ತ ಗುರೋ

ರಾಮಪದ ಕಮಲಭೃಂಗ ಗುರೋ

ಈ ಮಹಿಯೊಳು ಪ್ರಖ್ಯಾತ ಗುರೋ

ಐದೊಂದರಿಗಳ ಗೆಲಿದೆ ಗುರೋ

ಐದೊಂದು ಶಾಸ್ತ್ರ ತಿಳಿಸುವ ಗುರೋ

ಶರಣರ ಪಾಲಿಪ ನಮ್ಮ ಗುರೋ

ಕರುಣಾಸಾಗರ ನೀನೆ ಗುರೋ

ತಾಮಸಮತಿಗಳ ಕಳೆವ ಗುರೋ

ರಾಮಪದ ಕಮಲ ಭೃಂಗ ಗುರೋ

ಎಂತಾದರು ಸ್ಮರಿಸುವರ ಗುರೋ

ಭ್ರಾಂತಿ ಜ್ಞಾನ ಪರಿಹರಿಪ ಗುರೋ

ಸಂಸಾರಾಬ್ಧಿಗೆ ಪೋತ ಗುರೋ

ಕಂಸಾಂತಕ ನಿಜಭಕುತ ಗುರೋ

ಯೋಗಾಭ್ಯಾಸಾಸಕ್ತ ಗುರೋ

ಭಾಗೀರಥಿ ಪಿತ ಭಕ್ತ ಗುರೋ

ಹರಿ ಸರ್ವೋತ್ತಮನೆನುತ ಗುರೋ

ಮೆರಿಸಿ ಡಂಗುರ ಹೊಯ್ಸಿರುವ ಗುರೋ

ವಾಯು ಜೀವೋತ್ತಮನೆನುತ ಗುರೋ

ಮಾಯಿಗಳಲಿ ಸ್ಥಾಪಿಸಿದ ಗುರೋ

ಗಣನೆಗೆ ಶಕ್ಯವೆ ಮಹಿಮೆ ಗುರೋ
ಮಣಿದು ನುತಿಪೆ ಪಾಲಿಪುದು ಗುರೋ
ನುಡಿಸಿದಂತೆ ನುಡಿತಿರುವೆ ಗುರೋ
ಜಡಮತಿ ನಾನೇಂ ಬಲ್ಲೇ ಗುರೋ
ಬೇಡುವೆ ಸೆರಗೊಡ್ಡುತಲಿ ಗುರೋ
ನೀಡುವುದೆನಗಿದೆ ವರವ ಗುರೋ
ಜನುಮ ಜನುಮ ದೊಳಗೆನಗೆ ಗುರೋ
ನಿನ್ನ ನಾಮವ ಸ್ಮರಿಸುವುದ ಗುರೋ
ಹರಿಗುರುಗಳ ದೃಢಭಕುತಿ ಗುರೋ
ಕರುಣಿಸಿ ಕಾವುದು ಎಮ್ಮ ಗುರೋ
ಹನುಮನಯ್ಯನ ನಿಜದಾಸ ಗುರೋ
ಘನಕರುಣಾನಿಧಿ ಕಲ್ಪತರು ಗುರೋ

## ಮಂಗಳ

ಜಯ ಮಂಗಳ ರಾಘವೇಂದ್ರ ಗುರೋ
ಶುಭಮಂಗಳ ರಾಘವೇಂದ್ರ ಗುರೋ
ಮಂಗಳ ಸದ್ಗುಣ ಸಾಂದ್ರ ಗುರೋ
ತುಂಗಾತೀರನಿವಾಸ ಗುರೋ

ಶ್ರೀ ರಾಘವೇಂದ್ರ ಗುರುಭಜನಂ ಸಂಪೂರ್ಣಮ್

ಶ್ರೀಕೃಷ್ಣಾರ್ಪಣಮಸ್ತು



ಶ್ರೀರಸ್ತು

ಪೂಜ್ಯಾಯ ರಾಘವೇಂದ್ರಾಯ | ಸತ್ಯಧರ್ಮ ರತಾಯಚ |
ಭಜತಾಂ ಕಲ್ಪವೃಕ್ಷಾಯ | ನಮತಾಂ ಕಾಮಧೇನವೇ ||

ಮೇಲಿನ ಶ್ಲೋಕದ ಪ್ರತಿಯೊಂದು ಅಕ್ಷರಕ್ಕೂ ಅರ್ಥವನ್ನು ದಿನಾಂಕ 27-6-70 ಶನಿವಾರ ಮಂತ್ರಾಲಯದಲ್ಲಿ ಶ್ರೀ ಗುರುರಾಜರ ದಯೆಯಿಂದ ರಚಿಸಿ ಪೀಠಸ್ಥರಾದ ಶ್ರೀ ಶ್ರೀ ಶ್ರೀ ೧೦೮ ಸುಜಯೀಂದ್ರತೀರ್ಥ ಶ್ರೀ ಪಾದಂಗಳವರ ಹೃದಯಾಂತರ್ಗತ ಶ್ರೀ ರಾಘವೇಂದ್ರ ಹೃತ್ಕಮಲನಿವಾಸಿ ಶ್ರೀ ಮೂಲರಾಮರಿಗೆ ಅರ್ಪಣೆ ಮಾಡಿರುತ್ತೇನೆ.

ಪೂಜಾರ್ಹರು
ಜಾತಿಭೇದವೆಣಿಸಿ ಪಕ್ಷಪಾತಮಾಡದವರು
ಯಮನಿಯಮಾನುಷ್ಠಪರರು
ಯಮ ಬಾಧೆ ನಿವಾರಿಸುವವರು
ರಾಮನ ದರ್ಶನ ಮಾಡಿದವರು
ಘನ ಪಾಪ ವಿಮೋಚಕರು
ವೇಂಕಟರಮಣನ ಅನುಗ್ರಹ ಪಾತ್ರರು
ದಾರಿದ್ರ್ಯ ನಿವಾರಕರು
ರವಿಯಂತೆ ಭುವಿಯೊಳು ರಾರಾಜಿಸುತ್ತಿರುವವರು.
ಯತಿ ಶ್ರೇಷ್ಠರು
ಸಕಲ ಕಲಾ ಪ್ರವೀಣರು
ತತ್ವ ಶಾಸ್ತ್ರ ಪಾರಂಗತರು
ಯಶಸ್ಸನ್ನು ಕೊಡುವವರು

ಧರ್ಮವನ್ನು ಜಾಣನೆನಿಸುವ ಜ್ಞಾನ ದಾತರು

ರಮಣೀಯ ತಂತೀವಾದ್ಯ ಪ್ರವೀಣರು

ಮಧ್ವಮತವನ್ನು ಉದ್ಧರಿಸಿದ ಜ್ಞಾನಿಗಳು

ರಕ್ಷಿಸುವ ಸಾಮರ್ಥ್ಯಉಳ್ಳವರು

ತಾಪವನು ಹರಿಸುವ ಮಹಾತಪಸ್ವಿಗಳು

ಯಜ್ಞಪ್ರಿಯರು

ಚಂಡಾಲನನ್ನು ಅನುಗ್ರಹಿಸುವ ವಿಶಾಲದೃಷ್ಟಿಯುಳ್ಳವರು

ಭಕ್ತೋದ್ಧಾರಕರು

ಜನನ ಮರಣಾತೀತರು

ತಾರಕ ಮಂತ್ರ ಸಿದ್ಧರು

ಮಹಿಮಾ ಪುರುಷರು

ಕಲುಷ ದೂರರು

ಲವಲೇಶವೂ ಆಶೆಪಡದವರು

ಪರಿಮಳ ಗ್ರಂಥರಚಿಸಿದ ಘನ ಪಂಡಿತರು

ವೃಂದಾವನ ಸಶರೀರವಾಗಿ ಪ್ರವೇಶಿಸಿದ ಮಹಾತ್ಮರು

ಕ್ಷಾಮ ನಿವಾರಕರು

ಯಥೇಚ್ಛ ಫಲ ದಾತರು

ನರಕವನ್ನು ದಾಟಿಸುವವರು

ಮಂತ್ರಾಲಯ ನಿವಾಸಿಗಳು

ತಾಂತ್ರಿಕ ಜ್ಞಾನಾಢ್ಯರು

ಕಾಷಾಯ ವಸನ ಧಾರಿಗಳು
ಮರಣ ಹೊಂದಿದವರನ್ನು ಪುನರುಜ್ಜೀವಗೊಳಿಸುವವರು
ಧೇನುವಿನಂತೆ ವಿಶೇಷ ಜ್ಞಾನಾಮೃತ ಕೊಡುವವರು
ನಭೋಮಂಡಲವನ್ನು ವ್ಯಾಪಿಸಿದ ಸೂಕ್ಷ್ಮ ಶರೀರಉಳ್ಳವರು
ವೇದಸಾರಾನುಭವ ಪೂರ್ಣಪ್ರಜ್ಞರು
ಸರ್ವಜನ ಅಜ್ಞಾನವನ್ನು ಹೋಗಲಾಡಿಸಿದವರು
ಮಹತ್ ಕಾರ್ಯಗಳನ್ನು ಸಾಧಿಸಿ ನಡೆಸುತ್ತಿರುವ
ಮಹಾತ್ಮರು.

## ರಚನೆ

ದಿ|| ಪಟೇಲು ರಾಘವೇಂದ್ರಚಾರ್ಯರ ಮಗ
ಯಂ. ಶೇಷಗಿರಿ ಆಚಾರ್

ಬಳ್ಳಾರಿ ಸಹೋದರರು – ಬೆಂಗಳೂರು.

—o—

# ದ್ವೈತ ಯತಿಗಳು

| | | |
|---|---|---|
| 1. | ಶ್ರೀಮನ್ ಮಧ್ವಾಚಾರ್ಯರು | (ಮೂಲಪುರುಷರು) |
| 2. | ಶ್ರೀ ಪದ್ಮನಾಭತೀರ್ಥರು | ನವಬೃಂದಾವನ - ಹಂಪೆ |
| 3. | ಶ್ರೀ ನರಹರಿತೀರ್ಥರು | ಹಂಪೆ |
| 4. | ಶ್ರೀ ಮಾಧವತೀರ್ಥರು | ಮಣೂರು |
| 5. | ಶ್ರೀ ಅಕ್ಷೋಭ್ಯತೀರ್ಥರು | ಮಳಖೇಡ |
| 6. | ಶ್ರೀ ಜಯತೀರ್ಥರು | ಮಳಖೇಡ |
| 7. | ಶ್ರೀ ವಿದ್ಯಾಧಿರಾಜರು | ಎರಗೊಳ |
| 8. | ಶ್ರೀ ಕವೀಂದ್ರರು | ನವಬೃಂದಾವನ - ಹಂಪೆ |
| 9. | ಶ್ರೀ ವಾಗೀಶತೀರ್ಥರು | ” |
| 10. | ಶ್ರೀರಾಮಚಂದ್ರತೀರ್ಥರು | ” |
| 11. | ಶ್ರೀ ವಿಬುಧೇಂದ್ರತೀರ್ಥರು | ತಿರುನಲ್ವೇಲಿ |
| 12. | ಶ್ರೀ ಜಿತಾಮಿತ್ರರು | ಕಾಡ್ಲೂರು |
| 13. | ಶ್ರೀ ರಘುನಂದನತೀರ್ಥರು | ಹಂಪೆ |
| 14. | ಶ್ರೀ ಸುರೇಂದ್ರತೀರ್ಥರು | ಮಧುರೆ |
| 15. | ಶ್ರೀ ವಿಜಯೀಂದ್ರತೀರ್ಥರು | ಕುಂಭಕೋಣ |
| 16. | ಶ್ರೀ ಸುಧೀಂದ್ರರು | ನವಬೃಂದಾವನ - ಹಂಪೆ |
| 17. | ಶ್ರೀ ರಾಘವೇಂದ್ರರು | ಮಂತ್ರಾಲಯ |
| 18. | ಶ್ರೀ ಯೋಗೀಂದ್ರರು | ಶ್ರೀರಂಗ |

| | | |
|---|---|---|
| 19. | ಶ್ರೀ ಸೂರೀಂದ್ರತೀರ್ಥರು | ಮಧುರೆ |
| 20. | ಶ್ರೀ ಸುಮತೀಂದ್ರರು | ಶ್ರೀರಂಗ |
| 21. | ಶ್ರೀ ಉಪೇಂದ್ರರು | „ |
| 22. | ಶ್ರೀ ವಾದೀಂದ್ರರು | ಮಂತ್ರಾಲಯ |
| 23. | ಶ್ರೀ ವಸುಧೇಂದ್ರರು | ಕೆಂಚನ ಗುಡ್ಡ |
| 24. | ಶ್ರೀ ವರದೇಂದ್ರರು | ಪೂನಾ |
| 25. | ಶ್ರೀ ಧೀರೇಂದ್ರರು | ಹೊಸರಿತ್ತಿ |
| 26. | ಶ್ರೀ ಮುನೀಂದ್ರರು | ಶ್ರೀರಂಗ |
| 27. | ಶ್ರೀ ಸುಬುಧೇಂದ್ರರು | ನಂಜನಗೂಡು |
| 28. | ಶ್ರೀ ಸುಜನೇಂದ್ರರು | „ |
| 29. | ಶ್ರೀ ಸುಜ್ಞಾನೇಂದ್ರರು | „ |
| 30. | ಶ್ರೀ ಸುಧರ್ಮೇಂದ್ರರು | ಮಂತ್ರಾಲಯ |
| 31. | ಶ್ರೀ ಸುಗುಣೇಂದ್ರರು | ಚಿತ್ತೂರು |
| 32. | ಶ್ರೀ ಸುಪ್ರಜ್ಞೇಂದ್ರರು | ನಂಜನಗೂಡು |
| 33. | ಶ್ರೀ ಸುಕೃತೀಂದ್ರರು | „ |
| 34. | ಶ್ರೀ ಸುಶೀಲೇಂದ್ರರು | ಹೊಸರಿತ್ತಿ |
| 35. | ಶ್ರೀ ಸುವ್ರತೀಂದ್ರರು | ಮಂತ್ರಾಲಯ |
| 36. | ಶ್ರೀ ಸುಯಮೀಂದ್ರರು | „ |

ಶ್ರೀ ಶ್ರೀ ಶ್ರೀ ೧೦೮. ಸುಜಯೀಂದ್ರತೀರ್ಥರು

(ಪೀಠಸ್ಥರಾದ ಗುರುಗಳು)

